ಶ್ರೀಸುಯಮೀರಾಘವೇಂದ್ರ
ಪ್ರಕಾಶನ ಸಂಖ್ಯೆ - 22

ಶ್ರೀಸುಶೀಲೇಂದ್ರವಿಜಯಮಾಲಾ
ಸಂಖ್ಯೆ - 12

**ಕಮಲೇಶ ಕುಸುಮ - 2**

## ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತಾ

# ಶ್ರೀಕೃಷ್ಣಚಾರಿತ್ರಮಂಜರೀ

ಅನುವಾದಕರು :

ಶ್ರೀರಾಘವೇಂದ್ರಗುರುವಂಶಭೂಷಣ, ವಿದ್ಯಾದಿರಾಜ, ವಿಧ್ಯಾವಾಚಸ್ಪತಿ,
ಸರಸ್ವತಿಕಂಠಾಭರಣಂ

**ರಾಜಾ ಶ್ರೀ. ಗುರುರಾಜಾಚಾರ್ಯ**

ಪ್ರಕಾಶಕರು :

ಶ್ರೀಸುಯಮೀರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು - ಬೆಂಗಳೂರು

**2010**

# ಸಂಸ್ಥೆಯ ಸಾಮ್ರಾಟ್ ಪೋಷಕರು




ಪೊಡವಿಗೊಡೆಯರಾದ ಶ್ರೀಗುರುರಾಯರನ್ನು ಹೃದಯಗುಡಿಯಲ್ಲಿ ಅಡಗಿಸಿ ಎಂದೂ ಮಾಸದ ಮೃದು ಮಧುರ ಮುಗ್ಧ ನಗೆಯನ್ನು ಹೊರಸೂಸುತ್ತ ತಮ್ಮ ಅಮೃತಹಸ್ತದ ಹಿಡಿಯಿಂದ ಮಂತ್ರಾಕ್ಷತೆಯನ್ನು ನೀಡುತ್ತಾ ತೇಡಿಬಂದು ಬೇಡಿದವರ ಇಷ್ಟಾರ್ಥಗಳನ್ನು ಇಡೇರಿಸುತ್ತಾ ಅನಂತ ಭಕ್ತಸಮೂಹದಿಂದ

**'ನಡೆದಾಡುವ ರಾಯರು'** ಎಂದು

ಪ್ರಾಥಃಸ್ಮರಣೀಯರಾಗಿ ಭಕ್ತಿ ಗೌರವದಿಂದ ಪೂಜಿಸಲ್ಪಡುತ್ತಿರುವ

**'ಶ್ರೀ ರಾಯರ ಕರುಣೆಯ ಕಂದರಾದ' ಪರಮಪೂಜ್ಯ**

**108 ಶ್ರೀ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರು.**

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

# ಗ್ರಂಥಸಮರ್ಪಣೆ

ಭಾಷ್ಯಕಾರರಾಗಿ, ಟೀಕಾಕಾರರಾಗಿ, ಟಿಪ್ಪಣಿಕಾರರಾಗಿ,
ಶ್ರೀಮನ್ಮಧ್ವಸಿದ್ಧಾಂತವೆಂಬ ತತ್ತ್ವಜ್ಞಾನ ಕಲ್ಪವೃಕ್ಷವನ್ನು
ತಮ್ಮ ಅಪೂರ್ವ, ಅಸದೃಶ, ಶ್ರೇಷ್ಠ ಗ್ರಂಥಗಳಿಂದ
ಫಲಭರಿತವನ್ನಾಗಿಸಿ, ಆ ಪರಿಮಳಯುಕ್ತವಾದ
ಸತ್ಫಲದ ಸವಿಜೇನಿನ ತತ್ತ್ವಸುಧೆಯನ್ನು ವಸುಧೆಯೊಳು
ಸುಧೀಜನರು ಆಸ್ವಾದಿಸಿ ಆತ್ಮೋದ್ಧಾರದ ಅನುಭವವನ್ನು
ಹೊಂದಿ, ಆನಂದಿಸುವಂತೆ ಅನುಗ್ರಹಿಸಿ
ಆಶೀರ್ವದಿಸುತ್ತಿರುವ ಅತ್ಯಂತ ದಯಾಳುಗಳಾದ
ಜಗದ್ಗುರು ಶ್ರೀಮದ್ರಾಘವೇಂದ್ರತೀರ್ಥ ಗುರುಸಾರ್ವಭೌಮರ
ಇಪತ್ತೈದು ಶ್ರೇಷ್ಠಗ್ರಂಥಗಳಿಂದ ಸಮಲಂಕೃತವಾದ "ಶ್ರೀ ಗುರುರಾಜಸಂಪುಟಮ್"
ಎಂಬ ಪವಿತ್ರವಾದ ಗ್ರಂಥಪುಷ್ಪವನ್ನು
ಪೂಜ್ಯ ಶ್ರೀಸುಯತೀಂದ್ರತೀರ್ಥ ಶ್ರೀಪಾದಂಗಳವರ 75ನೇ ವರ್ಷದ
ವರ್ಧಂತ್ಯುತ್ಸವದ ಸವಿನೆನಪಿಗಾಗಿ ಹಾಗೂ
ಶ್ರೀಸುಯಮಿ ರಾಘವೇಂದ್ರ ಸಂಶೋಧನ ಕೇಂದ್ರದ
ಪಂಚಾದಶ ಸಂಸ್ಥಾಪನಾ ಮಹೋತ್ಸವದ ಸಂಸ್ಮರಣಾರ್ಥವಾಗಿ
ಶ್ರೀರಾಯರ ಪರಮಪಾವನ ಚರಣಕಮಲಗಳಲ್ಲಿ
ಪರಮಪೂಜ್ಯ ಶ್ರೀಸುಯತೀಂದ್ರತೀರ್ಥ ಶ್ರೀಪಾದಂಗಳವರ
ಅಮೃತಹಸ್ತಗಳಿಂದ ಸದ್ಭಕ್ತಿ-ಶ್ರದ್ಧಾದರ
ನಮನಪೂರ್ವಕವಾಗಿ ಸಮರ್ಪಿಸಲ್ಪಟ್ಟಿದೆ.



ಶ್ರೀಗುರುರಾಜರ ಚರಣಸೇವಕರು

ಪ್ರಕಾಶಕರು
ಶ್ರೀಸುಯಮೀ-ರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು-ಬೆಂಗಳೂರು

ದಿನಾಂಕ 23-09-2010
ಮಂತ್ರಾಲಯಂ

ಸಂಶೋಧನ ಕೇಂದ್ರದ ಸಾಮ್ರಾಟ್ ಪೋಷಕರು



ಶ್ರೀ ಸುಯಮೀಂದ್ರತೀರ್ಥರು

# ಸಾಮ್ರಾಟ್ ಪೋಷಕರು



ಶ್ರೀ ಸುಜಯೀಂದ್ರತೀರ್ಥರು



ಸಾಮ್ರಾಟ್ ಪೋಷಕರು : ಶ್ರೀ ಸುಶಮೀಂದ್ರತೀರ್ಥರು ಹಾಗೂ
ಶ್ರೀ ಸುಯತೀಂದ್ರತೀರ್ಥರು

# ಸಂಶೋಧನ ಕೇಂದ್ರದ ಸ್ಫೂರ್ತಿಮೂರ್ತಿಗಳು



ರಾಜಾ. ಶ್ರೀ. ವೇಣುಗೋಪಾಲಾಚಾರ್ಯ



ರಾಜಾ. ಶ್ರೀ. ಗುರುರಾಜಾಚಾರ್ಯ



ರಾಜಾ. ಶ್ರೀ. ಲಕ್ಷ್ಮೀನಾರಾಯಣಾಚಾರ್ಯ



ಡಾ. ಹುಲಿ. ಕೃ. ವೇದವ್ಯಾಸಾಚಾರ್ಯ

ಸಂಶೋಧನ ಕೇಂದ್ರದ ಸಂಸ್ಥಾಪಕರು

"ಶ್ರೀರಾಘವೇಂದ್ರಗುರುವಂಶಭೂಷಣಂ"

ರಾಜಾ. ಶ್ರೀ. ಗುರುರಾಜಾಚಾರ್ಯ



|| ಶ್ರೀಃ ||

|| ಶ್ರೀಮೂಲರಾಮೋ ವಿಜಯತೇತರಾಮ್ ||

|| ಶ್ರೀಗುರುರಾಜೋ ವಿಜಯತೇ ||

## ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತಾ

# ಶ್ರೀಕೃಷ್ಣಚಾರಿತ್ರಮಂಜರೀ

### ವಿದ್ವಚ್ಚಕ್ರಚೂಡಾಮಣಿ ಶ್ರೀ ಲಕ್ಷ್ಮೀನಾರಾಯಣಾಚಾರ್ಯರು

ರಚಿಸಿದ ವ್ಯಾಖ್ಯಾನಸಹಿತ

ಕನ್ನಡಾನುವಾದ :

**ರಾಜಾ ಶ್ರೀ. ಗುರುರಾಜಾಚಾರ್ಯ**

**ಅನುವಾದಕರ ಮಂಗಳಾಚರಣಕೆ**

ಶ್ರೀನಿವಾಸಂ ರಮಾಕಾಂತಂ ವೇದವೇದ್ಯಂ ಜಗತ್ಪತಿಮ್ ।
ಬ್ರಹ್ಮರುದ್ರಾದಿವಂದ್ಯಂ ಶ್ರೀ (ಮೇ) ಕುಲದೇವಂ ನಮಾಮ್ಯಹಮ್ || 1 ||

ಸುಯಮೀಂದ್ರಕರಾಂಭೋಜಪೂಜಿತಂ ಮಂಗಳಪ್ರದಮ್ ।
ಸಂತಾನಕೃಷ್ಣಪಾದಾಬ್ಜಮಾಶ್ರಯಾಮಿ ನಿರಂತರಮ್ || 2 ||

ಶ್ರೀಮನ್ಮಧ್ವಮುನೀಂದ್ರಪಾದಯುಗಲಂ ನತ್ವಾ ಜಯಾರ್ಯಂ ಭಜೇ
ಶ್ರೀಮದ್‌ದ್ವೈತಸುಭಾಷ್ಯಭಾವಮಮಲಂ ಪ್ರಾಕಾಶಯಂತಂ ಸತಾಮ್ ।
ಕರ್ಣಾಟಾವನಿಸಾರ್ವಭೌಮವಿನುತಂ ಶ್ರೀವ್ಯಾಸರಾಜಂ, ತತಃ
ತತ್ತಾದೃಗ್ವಿಜಯೀಂದ್ರಸಂಯಮಿಭರುಂ ಜ್ಞಾನಾಪ್ತಯೇ ಸಂಶ್ರಯೇ || 3 ||

ಸುಮಂತ್ರಸದ್ಮಗಂ ಭಜೇ ಸ್ವತಂತ್ರತತ್ತ್ವಬೋಧಕಮ್ ।
ಸುತಂತ್ರಶಾಸ್ತ್ರಕೋವಿದಂ ಸುಸಂಪ್ರದಾಯವರ್ಧಕಮ್ || 4 ||

ಸದ್ಭಕ್ತಜನಸಂದೋಹಕಲ್ಯಾಣಗತಿಹೇತವಃ ।
ಸುಯಮೀಂದ್ರಪದಾಂಭೋಜರೇಣವಃ ಪಾತು ಮಾಂ ಸದಾ || 5 ||

ಶ್ರೀರಾಘವೇಂದ್ರಸದ್ವಂಶ್ಯಃ ರಾಘವೇಂದ್ರಪದಾಶ್ರಯಃ ।
ರಾಜಾ ಶ್ರೀಗುರುರಾಜಾರ್ಯಃ ಸುಯಮೀಂದ್ರಪದಾರ್ಚಕಃ || 6 ||

ಕೃಷ್ಣಚಾರಿತ್ರಮಂಜರ್ಯಾಃ ವ್ಯಾಖ್ಯಾಮಾಲಂಬ್ಯ ಸಾಂಪ್ರತಮ್ ।
ಕರ್ಣಾಟಭಾಷಯಾ ವ್ಯಾಖ್ಯಾಂ ತನುತೇ ಶ್ರೀಶತುಷ್ಟಯೇ || 7 ||

ಪರಮ ಪೂಜ್ಯ ಜಗದ್ಗುರು ಶ್ರೀಮದ್ರಾಘವೇಂದ್ರ ತೀರ್ಥ ಗುರುಸಾರ್ವಭೌಮರವರ ಪೂರ್ವಾಶ್ರಮ ಸತ್ಪುತ್ರರೂ, ಸಕಲ ಶಾಸ್ತ್ರಕೋವಿದರೂ, ವಿದ್ವತ್ಕುಲಲಲಾಮರೂ, ಕವಿಕಂಠೀರವರೂ ಆದ ಶ್ರೀ ಲಕ್ಷ್ಮೀನಾರಾಯಣಾಚಾರ್ಯರು, ತಮ್ಮ ಪಿತೃವರೇಣ್ಯರೂ (ಪೂರ್ವಾಶ್ರಮ) ಮತ್ತು ಶ್ರೀಮನ್ಮಧ್ವಾಚಾರ್ಯರವರ ಮಹಾ ಸಂಸ್ಥಾನಾಧೀಶ್ವರರೂ, ಶ್ರೀ ಪ್ರಹ್ಲಾದ ವ್ಯಾಸರಾಜಾವತಾರಿಗಳೂ, ಭಾಗವತ ಶಿರೋಮಣಿಗಳೂ, ಜಗದ್ಗುರುಗಳೂ ಆದ ಶ್ರೀಮದ್ರಾಘವೇಂದ್ರ ತೀರ್ಥ ಶ್ರೀಮಚ್ಚರಣರವರು ಸಜ್ಜನರ ಉದ್ಧಾರಕ್ಕಾಗಿ ರಚಿಸಿರುವ "ಶ್ರೀಕೃಷ್ಣಚಾರಿತ್ರಮಂಜರೀ" ಎಂಬ ಗ್ರಂಥಕ್ಕೆ ವ್ಯಾಖ್ಯಾನವನ್ನು ರಚಿಸಲು ಪ್ರವೃತ್ತರಾಗಿ, ಶಿಷ್ಟಾಚಾರ ಪರಂಪರಾ ಪ್ರಾಪ್ತ ಕ್ರಮದಂತೆ ರಚಿಸುತ್ತಿರುವ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗುವುದಕ್ಕೋಸ್ಕರವಾಗಿ "ಕೃಷ್ಣಂ" ಎಂಬ ಪದ್ಯದಿಂದ ತಮ್ಮ ಇಷ್ಟದೇವತಾನಮಸ್ಕಾರ ರೂಪವಾದ ಮಂಗಳವನ್ನು ಆಚರಿಸುತ್ತಾರೆ.

### ವ್ಯಾಖ್ಯಾನ ಮಂಗಳಾಚರಣೆ

**ಕೃಷ್ಣಂ ಕೃತ್ಸ್ನಜಗಜ್ಜನ್ಮಕರ್ತಾರಂ ವಿಭುಮಚ್ಯುತಮ್ ।**
**ರುಕ್ಮಿಣೀಸತ್ಯಭಾಮಾಭ್ಯಾಮಾಶ್ಲಿಷ್ಟಂ ಪ್ರಣಮಾಮ್ಯಹಮ್ ॥ 1 ॥**

**ತಾತ್ಪರ್ಯ :-** ಚೇತನಾ ಚೇತನಾತ್ಮಕವಾದ ಸಮಸ್ತ ಪ್ರಪಂಚದ ಸೃಷ್ಟಿ ಸ್ಥಿತಿ ಸಂಹಾರ, ನಿಯಮನಾದಿಕಾರಣನೂ, ನಾಶರಹಿತನೂ, ವ್ಯಾಪಕನೂ, ಲಕ್ಷ್ಮೀ ಸ್ವರೂಪಿಣಿಯರಾದ ಶ್ರೀರುಕ್ಮಿಣೀ - ಸತ್ಯಭಾಮಾದೇವಿಯರಿಂದ ಆಲಿಂಗಿತನೂ ಆದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಉಪಾಸ್ಯ ಯತ್ಪದಂ ಧೀರಾಃ ಲಭಂತೇ ಜ್ಞಾನಸಂಪದಮ್ ।**
**ತಂ ವಂದೇ ಶ್ರೀಮದಾನಂದತೀರ್ಥಾರ್ಯಗುರುಶೇಖರಮ್ ॥ 2 ॥**

**ತಾತ್ಪರ್ಯ :-** ಯಾರ ಪಾದ ಕಮಲಗಳನ್ನು ಉಪಾಸನೆಮಾಡಿ ಜ್ಞಾನಿಗಳು (ಪಂಡಿತರು) ಮೋಕ್ಷೋಪಯೋಗಿಯಾದ ಸದ್‌ಜ್ಞಾನವನ್ನೂ ಮತ್ತು ಸಂಪತ್ತನ್ನೂ ಹೊಂದುವರೋ, ಅಂತಹ ಶ್ರೀಮದಾನಂದತೀರ್ಥರೆಂಬ ಶ್ರೇಷ್ಠ ಗುರುವರ್ಯರನ್ನು ನಮಸ್ಕರಿಸುತ್ತೇನೆ. ॥ 2 ॥

**ಅಸ್ಮದ್ದೇಶಿಕಪಾದಾ ಯೇ ಸಾಧವಸ್ಸತತಂ ಮಮ ।**
**ದೃಶಂ ದಿಶಂತು ಸನ್ಮಾರ್ಗಗಾಮಿನೀಂ ಮುಕ್ತಿದಾಯಿನೀಮ್ ॥ 3 ॥**

**ತಾತ್ಪರ್ಯ :-** ಸಾಧುಗಳೂ ನಮ್ಮ ಗುರುಗಳೂ, ಜನಕರೂ ಆದ ಪರಮ ಪೂಜ್ಯ ಶ್ರೀ ಗುರುಸಾರ್ವಭೌಮರವರು ನನಗೆ ಯಾವಾಗಲೂ ಮೋಕ್ಷಪ್ರದವಾದ ಸನ್ಮಾರ್ಗವನ್ನು ತೋರುವ ದೃಷ್ಟಿಯನ್ನು ಕೊಡಲಿ. ॥ 3 ॥

**ಪದವಾಕ್ಯಪ್ರಮಾಣಜ್ಞಾನ್ ಸರ್ವಶಾಸ್ತ್ರವಿಶಾರದಾನ್ ।**
**ರಾಘವೇಂದ್ರಗುರೂನ್ ವಂದೇ ವಾದಿಕಂಠೀರವಾನ್ ಸದಾ ॥ 4 ॥**

**ತಾತ್ಪರ್ಯ :-** ವ್ಯಾಕರಣ-ತರ್ಕ-ಪೂರ್ವೋತ್ತರ ಮಿಮಾಂಸಾ ಶಾಸ್ತ್ರಜ್ಞರೂ (ಶಾಸ್ತ್ರಪರಿಣತರೂ) ಸಕಲ ಶಾಸ್ತ್ರವಿಶಾರದರೂ ಪರವಾದಿಗಳೆಂಬ ಗಜಗಳಿಗೆ ಮೃಗೇಂದ್ರರೂ ಆದ ಶ್ರೀರಾಘವೇಂದ್ರ ಗುರುವರ್ಯರನ್ನು ಯಾವಾಗಲೂ ವಂದಿಸುತ್ತೇನೆ. ॥ 4 ॥

**ಲಕ್ಷ್ಮೀನಾರಾಯಣಾಖ್ಯೋऽಹಂ ಗುರುಪಾದಪ್ರಸಾದತಃ ।**
**ವಿವೃಣೋಮಿ ಯಥಾಬೋಧಂ ಕೃಷ್ಣಚಾರಿತ್ರಮಂಜರೀಮ್ ॥ 5 ॥**

**ತಾತ್ಪರ್ಯ :-** ಲಕ್ಷ್ಮೀನಾರಾಯಣಾಚಾರ್ಯನೆಂಬ ಹೆಸರಿನಿಂದ ಖ್ಯಾತನಾದ ನಾನು ಗುರುಪಾದರಾದ ಶ್ರೀಮದ್ರಾಘವೇಂದ್ರತೀರ್ಥ ಶ್ರೀಮಚ್ಚರಣರ ಅನುಗ್ರಹದಿಂದ ಪಠನಶೀಲರ ಬುದ್ಧಿಯನ್ನು ಅನುಸರಿಸಿ, ನನ್ನ ಬುದ್ಧಿಗೆ ಗೋಚರವಾದಷ್ಟು ಶ್ರೀಕೃಷ್ಣಚಾರಿತ್ರಮಂಜರೀ ಗ್ರಂಥವನ್ನು ವಿವರಿಸುತ್ತೇನೆ. ॥ 5 ॥

**ಕರ್ತೃಕರ್ಮಕ್ರಿಯಾದೀನಾಂ ಯಥಾಯೋಗಂ ಪ್ರಕಾಶಯೇ ।**
**ಅನ್ವಯಂ ಬಾಲಬೋಧಾಯ ಬುದ್ಧ್ಯಂತಾಂ ತಂ ವಿಚಕ್ಷಣಾಃ ॥ 6 ॥**

**ತಾತ್ಪರ್ಯ :-** ಕರ್ತೃಪದ, ಕರ್ಮಪದ ಮತ್ತು ಕ್ರಿಯಾಪದ ಇವುಗಳ ವಾಕ್ಯಗಳಲ್ಲಿನ ಅರ್ಥವು ಹೊಂದಿಕೆ-ಯಾಗುವಂತೆ, ಗ್ರಹಣ - ಧಾರಣಪಟುಗಳಾದ ಅಭ್ಯಾಸಶೀಲರ ತಿಳುವಳಿಕೆಗಾಗಿ ಅನ್ವಯವನ್ನು ಪ್ರಕಟಗೊಳಿಸುತ್ತೇನೆ. ಪ್ರಮಾಣ ಕೋವಿದರು ಇದನ್ನು ಅವಧರಿಸೋಣವಾಗಲಿ. ॥ 6 ॥

## ಶ್ರೀಕೃಷ್ಣಚಾರಿತ್ರಮಂಜರೀ

**ಅವತಾರಿಕೆ:** ಸಾಂಸಾರಿಕ ದುಃಖದಿಂದ ಬಳಲಿ ಬೆಂಡಾಗಿರುವ ಸಜ್ಜನರನ್ನು ಉದ್ಧಾರ ಮಾಡಬೇಕೆಂಬ ಅನುಗ್ರಹ ಬುದ್ಧಿಯಿಂದ ಪರಮ ಕರುಣಾಳುಗಳಾದ ಶ್ರೀರಾಘವೇಂದ್ರ ಮುನಿಗಳು ಸಜ್ಜನರ ಸಕಲದುಃಖನಿವೃತ್ತಿಪೂರ್ವಕ ಪರಮ-ಸುಖಪ್ರಾಪ್ತಿಗಾಗಿ, ಅದಕ್ಕೆ ಉಪಾಯಭೂತವಾದ, ಶ್ರೀಮದ್ಭಾಗವತ ಪ್ರತಿಪಾದ್ಯವಾದ ಶ್ರೀಕೃಷ್ಣ ಕಥೆಯನ್ನು ಸುಲಭ-ವಾಗಿಯೂ, ಬೇಗನೆಯೂ ಮನದಟ್ಟಾಗುವುದಕ್ಕೋಸ್ಕರ "ವಿಷ್ಣು" ಎಂಬ ಶ್ಲೋಕದಿಂದ ಸಂಗ್ರಹಿಸುತ್ತಾರೆ.

**ವಿಷ್ಣುರ್ಬ್ರಹ್ಮಾದಿದೇವೈಃ ಕ್ಷಿತಿಭರಹರಣೇ ಪ್ರಾರ್ಥಿತಃ ಪ್ರಾದುರಾಸೀತ್**
**ದೇವಕ್ಯಾಂ ನಂದನಂದೀ ಶಿಶುವಧವಿಹಿತಾಂ ಪೂತನಾಂ ಯೋ ಜಘಾನ ।**
**ಉತ್ಥಾನೌತ್ಸುಕ್ಯಕಾಲೇ ರಥಚರಣಗತಂ ಚಾಸುರಂ ಪಾದಘಾತೈಃ**
**ಚಕ್ರಾವರ್ತಂ ಚ ಮಾತ್ರಾ ಗುರುರಿತಿ ನಿಹಿತೋ ಭೂತಲೇ**
**ಸೋऽವತಾನ್ಮಾಮ್ ॥ 1 ॥**

**ಅನ್ವಯಾರ್ಥ :-** ವಿಷ್ಣುಃ - ಸರ್ವತ್ರವ್ಯಾಪ್ತನಾದ ಶ್ರೀಮನ್ನಾರಾಯಣನು, ಬ್ರಹ್ಮಾದಿದೇವೈಃ - ಚತುರ್ಮುಖ ಬ್ರಹ್ಮದೇವರೇ ಮೊದಲಾದ ದೇವತೆಗಳಿಂದ, ಕ್ಷಿತಿಭರಹರಣೇ - ಭೂಭಾರ ಹರಣಕ್ಕೋಸ್ಕರವಾಗಿ, ಪ್ರಾರ್ಥಿತಃ - ಪ್ರಾರ್ಥಿತನಾಗಿ, ದೇವಕ್ಯಾಂ - ದೇವಕೀದೇವಿಯಲ್ಲಿ, ಪ್ರಾದುರಾಸೀತ್ - ವಸುದೇವನ ದೆಶೆಯಿಂದ ಅವತರಿಸಿದನೋ, ಯಃ - ಯಾವ ಕೃಷ್ಣನು, ನಂದನಂದೀ - ನಂದಗೋಪನನ್ನು ಸಂತೋಷಗೊಳಿಸಿ, ಶಿಶುವಧವಿಹಿತಾಂ - ಬಾಲಕರ ಸಂಹಾರಕ್ಕಾಗಿ ಕಂಸನಿಂದ ಪ್ರೇರಿತಳಾದ, ಪೂತನಾಂ - ಪೂತನಾ ಎಂಬ ರಾಕ್ಷಸಿಯನ್ನು, ಜಘಾನ - ಸಂಹರಿಸಿದನೋ, ಉತ್ಥಾನೌತ್ಸುಕ್ಯಕಾಲೇ - ಉತ್ಥಾನ - ದೇವರ ದರ್ಶನಕ್ಕಾಗಿ ಹೊರಗೆ (ಗುಡಿಗೆ) ಹೋಗುವ ಕಾರ್ಯದ ಔತ್ಸುಕ್ಯ - ಅನುರಾಗ ವಿಶೇಷದ, ಕಾಲೇ - ಸಮಯದಲ್ಲಿ ರಥಚರಣ ಗತಂ - (ರಥಾಂಗ) ಚಕ್ರದೊಳಗೆ ಸೇರಿದ, ಅಸುರಂಚ -

ಶಕಟನೆಂಬ ದೈತ್ಯನನ್ನು ಸಹ, ಪಾದಘಾತೈಃ – ಚರಣಾಹತಿಗಳಿಂದ, ಜಘಾನ – ಸಂಹಾರ ಮಾಡಿದನೋ, ಮಾತ್ರಾ – ತಾಯಿಯಾದ ಯಶೋದಾ ದೇವಿಯಿಂದ, ಗುರುರಿತಿ – ಭಾರವೆಂದು, ಭೂತಲೇ – ಭೂಮಿಯಲ್ಲಿ, ನಿಹಿತಃ – ಕೂಡಿಸಲ್ಪಟ್ಟವನಾಗಿ, ಚಕ್ರಾವರ್ತಂ ಚ – ತೃಣಾವರ್ತನೆಂಬ ದೈತ್ಯನನ್ನು (ಸುಂಟರಗಾಳಿ ದೈತ್ಯನನ್ನು) ಕೂಡ, ಜಘಾನ – ಸಂಹರಿಸಿದನೋ, ಸಃ – ಅಂತಹ ಕೃಷ್ಣನು, ಮಾಂ – ನನ್ನನ್ನು, ಅವತಾತ್ – ರಕ್ಷಣಮಾಡಲಿ.

**ವಿಗ್ರಹವಾಕ್ಯ**

ವೇವೇಷ್ಟೀತಿ ವಿಷ್ಣುಃ । ಬ್ರಹ್ಮಾ ಆದಿರ್ಯೇಷಾಂತೇ ಬ್ರಹ್ಮಾದಯಃ, ತೇಚತೇ ದೇವಾಶ್ಚ ಬ್ರಹ್ಮಾದಿದೇವಾಃ ತೈಃ । ಕ್ಷಿತೇಃ ಭರಃ ಕ್ಷಿತಭರಃ, ತಸ್ಯ ಹರಣಂ ಕ್ಷಿತಭರಹರಣಂ, ತಸ್ಮಿನ್ ಕ್ಷಿತಿಭರಹರಣೇ । ದೇವಕಸ್ಯ ಅಪತ್ಯಂ ಸ್ತ್ರೀ ದೇವಕೀ, ತಸ್ಯಾಂ ದೇವಕ್ಯಾಮ್ । ನಂದಂ ನಂದಯತೀತಿ ನಂದನನಂದೀ । ಶಿಶೂನಾಂ ವಧಃ ಶಿಶುವಧಃ, ತಸ್ಮಿನ್ ವಿಹಿತಾ ಶಿಶುವಧವಿಹಿತಾ, ತಾಂ ಶಿಶುವಧವಿಹಿತಾಮ್ । ಉತ್ಥಾನಸ್ಯ ಔತ್ಸಕ್ಯಂ ಉತ್ಥಾನಔತ್ಸುಕ್ಯಂ, ತಸ್ಯಕಾಲಃ ತಸ್ಮಿನ್ ಉತ್ಥಾನೌತ್ಸುಕ್ಯಕಾಲೇ । ರಥಸ್ಯ ಚರಣಂ ರಥಚರಣಂ, ರಥಚರಣಂ ಗತಃ ರಥಚರಣಗತಃ ತಂ ರಥಚರಣಗತಮ್ । ನ ಸುರಃ ಅಸುರಃ ತಂ ಅಸುರಮ್ । ಪಾದಸ್ಯ ಘಾತಾಃ ಪಾದಘಾತಾಃ ತೈಃ ಪಾದಘಾತೈಃ । ಚಕ್ರವತ್ ಆವರ್ತತ ಇತಿ ಚಕ್ರಾವರ್ತಃ, ತಂ ಚಕ್ರಾವರ್ತಮ್ ॥

**ವಿಶೇಷ ವಿಚಾರಃ**

ಶ್ರೀ ರಾಘವೇಂದ್ರ ಗುರುಸಾರ್ವಭೌಮರು ಭಾಗವತ ಪ್ರತಿಪಾದ್ಯವಾದ ಶ್ರೀ ಕೃಷ್ಣನ ವಿಸ್ತಾರವಾದ ಕಥೆಯನ್ನು ಒಂದೊಂದು ಪದ್ಯದಲ್ಲಿ ಎಂತು ಹೃದಯಂಗಮವಾಗಿ ಸಂಗ್ರಹಿಸಿದ್ದಾರೆಂಬುದನ್ನು ಶ್ರೀ ಗುರುರಾಜರ ಪೂರ್ವಾಶ್ರಮ-ಪುತ್ರರಾದ ಶ್ರೀ ಲಕ್ಷ್ಮೀನಾರಾಯಣಾಚಾರ್ಯರು ತಮ್ಮ ವ್ಯಾಖ್ಯಾನದಲ್ಲಿ, ಸಂಗ್ರಹಿಸಲ್ಪಟ್ಟ ಕಥೆಯನ್ನು ಸಿದ್ಧಾಂತಕ್ಕೆ ಅವಿರುದ್ಧವಾಗಿ ''ಅನೇನ'' ಎಂದು ಪ್ರಾರಂಭಿಸಿ ''ಇತ್ಯಾದಿ ಕಥಾ ಸೂಚಿತಾ'' ಎಂದು ತಾತ್ಪರ್ಯವನ್ನು ಬರೆದು ಆಪಂಡಿತ ಪಾಮರರಲ್ಲಿ ಅನುಗ್ರಹ ಮಾಡಿದ್ದಾರೆ. ಅದರ ಅಧ್ಯಯನದಿಂದ ಸಮಸ್ತ ಕೃಷ್ಣ ಕಥೆಯೂ ಓದುಗರ ಸ್ಮೃತಿ ಪಟಲದಲ್ಲಿ ಕಂಗೊಳಿಸಿ ಪರಮಾನಂದವಾಗುತ್ತದೆ.

ಇಲ್ಲಿ ಮೊದಲಿನ ಶ್ಲೋಕಕ್ಕೆ ಮಾದರಿಗಾಗಿ ಸಾಮಾನ್ಯ ತಾತ್ಪರ್ಯವನ್ನೂ, ಆನಂತರ ಶ್ರೀ ಲಕ್ಷ್ಮೀನಾರಾಯಣಾ-ಚಾರ್ಯರ ವ್ಯಾಖ್ಯಾನದಂತೆ ವಿಸ್ತಾರ ಕಥಾಭಾಗವನ್ನು ''ಕಥಾಭಿಪ್ರಾಯ'' ಎಂಬುದಾಗಿ ಅಧ್ಯಯನಶೀಲರ ಸೌಕರ್ಯಕ್ಕಾಗಿ ಕೊಟ್ಟಿದ್ದೇವೆ. ಮುಂದಿನ ಶ್ಲೋಕಗಳಿಗೆ ವಿಸ್ತಾರವಾದ ಕಥೆಯನ್ನು ಸೂಚಿಸುವ ಒಂದೇ ತಾತ್ಪರ್ಯವನ್ನು ಶ್ರೀಲಕ್ಷ್ಮೀ-ನಾರಾಯಣಾಚಾರ್ಯರ ವ್ಯಾಖ್ಯಾನವನ್ನು ಅನುಸರಿಸಿ ಕೊಡಲಾಗುವುದು.

**ತಾತ್ಪರ್ಯ :-** ಪೂರ್ವದಲ್ಲಿ ಸರ್ವತ್ರವ್ಯಾಪ್ತನಾದ ಶ್ರೀಮನ್ನಾರಾಯಣನು ಬ್ರಹ್ಮಾದಿ ದೇವತೆಗಳಿಂದ ಭೂಭಾರ ಹರಣಕ್ಕಾಗಿ ಪ್ರಾರ್ಥಿತನಾಗಿ ದೇವಕಿಯಲ್ಲಿ ವಸುದೇವನ ದೆಶೆಯಿಂದ ಅವತರಿಸಿ, ನಂದಗೋಪನನ್ನು ಸಂತೋಷಗೊಳಿಸಿ, ಶಿಶುಗಳ ವಧಾರ್ಥವಾಗಿ ಕಂಸನಿಂದ ಪ್ರೇರಿತಳಾದ ಪೂತನೆಯೆಂಬ ರಾಕ್ಷಸಿಯನ್ನು ಸಂಹರಿಸಿ, ಗುಡಿಗೆ ದೇವರ ದರ್ಶನಕ್ಕಾಗಿ ಹೋಗಿಬರುವ ಉತ್ಸವ ಕಾಲದಲ್ಲಿ ರಥದ ಅಂಗವಾದ ಚಕ್ರದಲ್ಲಿದ್ದ ಶಕಟನೆಂಬ ದೈತ್ಯನನ್ನು ಪಾದಾಘಾತಗಳಿಂದ ಸಂಹರಿಸಿ, ತಾಯಿಯಾದ ಯಶೋದಾದೇವಿಗೆ ತನ್ನ ಭಾರವನ್ನು ತೋರಿಸಿ ಅವಳು ಶ್ರೀಕೃಷ್ಣನು ಭಾರವಾಗಿದ್ದಾನೆಂಬ ಆಶ್ಚರ್ಯದಿಂದ ಕೆಳಗೆ ಕೂಡಿಸಲು ಸುಂಟರಗಾಳಿಯ ರೂಪದಿಂದ ಬಂದ (ತೃಣಾವರ್ತನೆಂಬ) ದೈತ್ಯನು ತನ್ನನ್ನು ಎತ್ತಿಕೊಂಡು ಆಕಾಶಕ್ಕೆ ಹಾರಲು ಅಲ್ಲಿ ಅವನ ಕುತ್ತಿಗೆಯನ್ನು ಮುರಿದು ಸಂಹರಿಸಿದನು. ಇಂಥ ಶ್ರೀ ಕೃಷ್ಣನು ನನ್ನನ್ನು ರಕ್ಷಿಸಲಿ.

**ಕಥಾಭಿಪ್ರಾಯ:**

ಪೂರ್ವದಲ್ಲಿ ಕ್ಷೀರಸಮುದ್ರಶಾಯಿಯಾದ ಶ್ರೀಮನ್ನಾರಾಯಣನ ಸನ್ನಿಧಿಗೆ ದೇವತೆಗಳಿಂದೊಡಗೂಡಿದ ಶ್ರೀಚತು-ರ್ಮುಖ ಬ್ರಹ್ಮದೇವರು ಬಂದು ಭೂಮಿಯಲ್ಲಿ ದುಷ್ಟರು ಅಧಿಕರಾಗಿ ಸಜ್ಜನರನ್ನು ಹಿಂಸಿಸುತ್ತಾ ಧರ್ಮಘಾತಿ-ಗಳಾಗಿರುವುದರಿಂದ ದುಷ್ಟನಿಗ್ರಹಮಾಡಿ ಭೂಭಾರವನ್ನಿಳಿಸಿ ಸುಜನರನ್ನು ಉದ್ಧರಿಸಿ ಧರ್ಮ ಸಂಸ್ಥಾಪನೆಯನ್ನು ಮಾಡಬೇಕೆಂದು ಶ್ರೀ ಹರಿಯನ್ನು ಪ್ರಾರ್ಥಿಸಿದರು. ಬ್ರಹ್ಮಾದಿ ದೇವತೆಗಳ ಪ್ರಾರ್ಥನೆಗೆ ಮೈದೋರಿದ ಶ್ರೀ ಹರಿಯು ಬ್ರಹ್ಮಾದಿ ದೇವತೆಗಳಿಂದ ಸಹಿತನಾಗಿ ಮೇರುಪರ್ವತಕ್ಕೆ ಬಂದು ಅಲ್ಲಿ ಬ್ರಹ್ಮದೇವರನ್ನು ಕುರಿತು ''ನಿಮ್ಮ ಪ್ರಾರ್ಥನೆಯಂತೆ ನೀವು ಹೇಳಿದ ಸ್ಥಳದಲ್ಲಿ ನಾನು ಅವತರಿಸಿ ನಿಮ್ಮ ಮನೋರಥವನ್ನು ಪೂರ್ಣ ಮಾಡುತ್ತೇನೆ. ನಾನು ಎಲ್ಲಿ ಅವತರಿಸ-ಬೇಕು ? ಹೇಳಿರಿ'' ಎಂದು ಕೇಳಿದನು.

ಅದಕ್ಕೆ ಬ್ರಹ್ಮದೇವರು ''ಹಿಂದೆ ನಾನು ವರುಣನಿಗೆ ಅಮೃತವರ್ಷಿಗಳಾದ ಗೋವುಗಳನ್ನು ಕೊಟ್ಟಿದ್ದೆನು. ಅವನ ತಂದೆಯಾದ ಕಶ್ಯಪನು ತನ್ನ ಪತ್ನಿಯರಾದ ಅದಿತಿ-ಸುರಭಿಯರಿಂದ ಪ್ರಚೋದಿತನಾಗಿ ಆ ಗೋವುಗಳನ್ನು ಅಪಹರಿಸಿದನು. ಅದರಿಂದ ನಾನು ಕುಪಿತನಾಗಿ ಪತ್ನಿಯರೊಡನೆ ಕ್ಷತ್ರಿಯ ಜಾತಿಯಲ್ಲಿ ಗೋಜೀವಿಗಳಾಗಿ ಅವತರಿಸುವಂತೆ ಶಾಪವನ್ನು ಕೊಟ್ಟಿದ್ದೆನು. ನನ್ನಿಂದ ಶಾಪ ಪಡೆದ ಕಶ್ಯಪನು ಈಗ ಭೂಮಿಯಲ್ಲಿ ಯದುವಂಶದಲ್ಲಿ ಖ್ಯಾತನಾದ, ಬಹುಗೋಧನ ಯುಕ್ತನಾದ ಶೂರ ಎಂಬುವನಿಗೆ ಪುತ್ರನಾಗಿ ವಸುದೇವನೆಂಬ ಹೆಸರಿನಿಂದ ಅವತರಿಸಿರುವನು. ಕಶ್ಯಪನ ಪತ್ನಿಯರು ದೇವಕಿ - ರೋಹಿಣಿಯರಾಗಿ ಜನಿಸಿರುವರು. ಅವರು ನೀನೇ ತಮಗೆ ಪುತ್ರನಾಗಬೇಕೆಂದು ತಪಸ್ಸನ್ನಾಚರಿಸಿರುವರು. ಮತ್ತು ದ್ರೋಣನೆಂಬ ವಸುವು ತನ್ನ ಪತ್ನಿಯರಿಂದ ಕೂಡಿ ನೀನೇ ತನಗೆ ಸುತನಾಗಬೇಕೆಂದು ತಪಸ್ಸನ್ನೆಸಗಿರುವನು. ಆ ದ್ರೋಣನಾಮಕ ವಸುವೇ ಈಗ ಶೂರಸೇನನಿಗೆ ಮಗನಾಗಿ ವೈಶ್ಯಕನ್ಯೆಯಲ್ಲಿ ನಂದಗೋಪನೆಂಬ ಹೆಸರಿನಿಂದ ಹುಟ್ಟಿರುವನು. ಅವನ ಪತ್ನಿಯೇ ಯಶೋದಾ ಎಂಬ ಹೆಸರಿನಿಂದ ಜನಿಸಿರುವಳು. ಆದುದರಿಂದ ಅವರೀರ್ವರ ಇಷ್ಟಾರ್ಥವನ್ನು ಪೂರ್ಣಮಾಡಲು ನೀನು ಮೊದಲು ದೇವಕೀ-ವಸುದೇವರಿಗೆ ಪುತ್ರನಾಗಿ ಅವತರಿಸಿ, ಅವರಿಗೆ ನಿನ್ನ ಸ್ವರೂಪವನ್ನು ತೋರಿಸಿ, ಅನಂತರ ಗೋಕುಲಕ್ಕೆ ಪ್ರಯಾಣ ಬೆಳೆಸಿ ಅಲ್ಲಿ ನಂದಗೋಪ-ಯಶೋದೆಯರಿಗೆ ಪುತ್ರನಾಗಿ ಬೆಳೆಯಬೇಕು'' ಎಂದು ವಿಜ್ಞಾಪಿಸಿದರು.

ನಾರಾಯಣನು ''ತಥಾಸ್ತು'' ಎಂದು ಬ್ರಹ್ಮದೇವರ ಪ್ರಾರ್ಥನೆಯನ್ನು ಅಂಗೀಕರಿಸಿ, ದೇವತೆಗಳೆಲ್ಲರೂ ಅಲ್ಲಲ್ಲಿ ಬ್ರಾಹ್ಮಣ-ಕ್ಷತ್ರಿಯಾದಿ ರೂಪಗಳಿಂದ ಅವತರಿಸಬೇಕೆಂದು ಆಜ್ಞಾಪಿಸಿ ಅಂತರ್ಧಾನ ಹೊಂದಿ, ವಸುದೇವನಿಗೆ ರೋಹಿಣೀ ದೇವಿಯಲ್ಲಿ ಶೇಷದೇವರು ಬಲರಾಮನಾಗಿ ಜನಿಸಿದ ಮೇಲೆ, ವಸುದೇವನಿಂದ ದೇವಕಿಯಲ್ಲಿ ಶ್ರೀಹರಿಯು ಸ್ವತಃ ಅವತರಿಸಿ, ಕಂಸನಿಂದ ಭೀತನಾದ ವಸುದೇವನಿಗೆ ಅಭಯವಿತ್ತು, ಕರ್ತವ್ಯವನ್ನು ಬೋಧಿಸಿ, ತನ್ನನ್ನು ನಂದಗೋಕುಲಕ್ಕೆ ಕರೆದೊಯ್ದು ಅಲ್ಲಿ ತನ್ನನ್ನು ಬಿಟ್ಟು ನಂದಗೋಪನಿಂದ ಯಶೋದೆಯಲ್ಲಿ ಅವತರಿಸಿರುವ ದುರ್ಗಾದೇವಿಯನ್ನು ಕರೆತಂದು ದೇವಕಿಗೆ ಕೊಡಬೇಕೆಂದು ಆಜ್ಞಾಪಿಸಿ ಶಿಶುರೂಪವನ್ನು ತಾಳಿದನು.

ವಸುದೇವನು ಶಿಶುರೂಪಿಯಾದ ಶ್ರೀಹರಿಯನ್ನು ಎತ್ತಿಕೊಂಡು ಯಮುನೆಯನ್ನು ದಾಟಿ, ನಂದಗೋಕುಲಕ್ಕೆ ಹೋಗಿ, ಅಲ್ಲಿ ಯಶೋದಾ ದೇವಿಯು ಆಗ ತಾನೇ ಪ್ರಸವಿಸಿದ್ದ ದುರ್ಗಾದೇವಿಯ ಸ್ಥಳದಲ್ಲಿ ಮಲಗಿಸಿ, ಶಿಶುರೂಪಳಾದ ದುರ್ಗಾದೇವಿಯನ್ನು ಎತ್ತಿಕೊಂಡು ಬಂದು ದೇವಕಿಗೆ ಅರ್ಪಿಸಿದನು. ಅತ್ತ ನಂದಗೋಕುಲದಲ್ಲಿ ಶಿಶುವಿನ ರೋದನ ಧ್ವನಿಯನ್ನು ಆಲಿಸಿ ನಂದಾದಿಗಳು ಧಾವಿಸಿ ಬಂದು ಸರ್ವಾಂಗ ಸುಂದರವಾದ ಗಂಡುಮಗು ಜನಿಸಿರುವುದನ್ನು ಕಂಡು ಪುತ್ರೋತ್ಪತ್ತಿಯಾಯಿತೆಂದು ಪರಮಾನಂದಭರಿತರಾದರು.

ಇತ್ತ ದೇವಕಿಯು ಯಾವಾಗ ಪ್ರಸವಿಸುವಳೋ ಎಂಬ ಚಿಂತೆಯಲ್ಲಿದ್ದ ಕಂಸನಿಗೆ ದೇವಕಿಯ ಪ್ರಸವ ವಿಚಾರವು ದೂತರಿಂದ ತಿಳಿಯಲು ಕಂಸನು ದೇವಕೀ ವಸುದೇವರಿದ್ದ ಸೆರೆಮನೆಗೆ ಬಂದು ದೇವಕಿಯ ಪಕ್ಕದಲ್ಲಿದ್ದ ಶಿಶುರೂಪಳಾದ ದುರ್ಗಾದೇವಿಯನ್ನು ಕಂಡು ಅವಳನ್ನು ಸಂಹರಿಸಲು ಉದ್ಯುಕ್ತನಾಗಲು ದುರ್ಗಾದೇವಿಯು ಕಂಸನ ಕರದಿಂದ ಅಂಬರಕ್ಕೆ ಹಾರಿ ''ಕಂಸ'' ನನ್ನನ್ನು ನೀನು ಸಂಹರಿಸಲಾರೆ! ನಿನ್ನನ್ನು ಸಂಹರಿಸಲು ಅವತರಿಸಿದ ಶತ್ರುವು ಬೇರೊಂದುಕಡೆ ಬೆಳೆಯುತ್ತಿರುವನು ಎಂದು ಹೇಳಿ ಅಂತರ್ಧಾನ ಹೊಂದಿದಳು.

ಕಂಸನು ಪಶ್ಚಾತ್ತಾಪದಿಂದ ವಸುದೇವ-ದೇವಕಿಯರನ್ನು ಬಿಡುಗಡೆ ಮಾಡಿ ಅವರನ್ನು ಸಂತೋಷಗೊಳಿಸಿ ತನ್ನ ಅರಮನೆಗೆ ತೆರಳಿ, ಶತ್ರುವು ಬೇರೊಂದೆಡೆಯಲ್ಲಿ ಹುಟ್ಟಿರುವ ವಾರ್ತೆಯನ್ನು ಕೇಳಿ ಭಯ-ಚಿಂತಾತುರನಾಗಿ ಮಂತ್ರಿಗಳೊಡನೆ ಆಪ್ತಾಲೋಚನೆಮಾಡಿ, ಆಗತಾನೆ ಜನಿಸಿರುವ ಎಲ್ಲ ಶಿಶುಗಳನ್ನೂ ಸಂಹರಿಸಲು ನಿಶ್ಚಯಿಸಿ, ತನ್ನ ಸಾಕು ತಾಯಿಯಾದ ಪೂತನೆಯನ್ನು ಕರೆಸಿ ಎಲ್ಲ ಮಕ್ಕಳುಗಳನ್ನೂ ಸಂಹರಿಸಬೇಕೆಂದು ಅವಳಿಗೆ ಅಪ್ಪಣೆ ಮಾಡಿದನು. ಕಂಸನ ಆಜ್ಞೆಯಂತೆ ಪೂತನೆಯು ಶಿಶು ಹನನಾರ್ಥವಾಗಿ ಸಂಚರಿಸುತ್ತಾ ಅನೇಕ ನವೋದಿತ ಶಿಶುಗಳನ್ನು ಸಂಹರಿಸಿ, ನಂದಗೋಕುಲಕ್ಕೆ ಬಂದು ಅರಮನೆಯನ್ನು ಪ್ರವೇಶಿಸಿ ಅಲ್ಲಿ ತೊಟ್ಟಿಲಿನಲ್ಲಿ ಆಟವಾಡುತ್ತ ಮಲಗಿದ್ದ ಕೃಷ್ಣನನ್ನು ಸಂಹರಿಸಲು ವಿಷಯುಕ್ತ ಸ್ತನಗಳಿಂದ ಕೃಷ್ಣನಿಗೆ ಕ್ಷೀರಪಾನ ಮಾಡಿಸಲು ಉದ್ಯುಕ್ತಳಾಗಲು ಶ್ರೀಕೃಷ್ಣನು ಕ್ಷೀರಪಾನದ ಜೊತೆಗೆ ಅವಳ ಅಸುವನ್ನೂ ಹೀರಿ ಪೂತನೆಯನ್ನು ಸಂಹರಿಸಿದನು. ಅನಂತರ ಅವಳ ದೇಹದಲ್ಲಿ ಆವಿಷ್ಟಳಾಗಿದ್ದ ತಾಟಕಿ ಎಂಬ ರಕ್ಕಸಿಗೆ ನರಕವನ್ನೂ, ತುಂಬುರನೆಂಬ ಗಂಧರ್ವನ ಸಂಗ ಮಾಡಿದ್ದರಿಂದ ಕುಪಿತನಾದ ಕುಬೇರನಿಂದ ಶಪ್ತಳಾಗಿ ಪೂತನೆಯಲ್ಲಿದ್ದ, ತಾನು ಸ್ತನ್ಯಪಾನ ಮಾಡಿದ್ದರಿಂದ ಪವಿತ್ರಳಾದ ಊರ್ವಶಿಯನ್ನು ಸ್ವರ್ಗಕ್ಕೆ ಕಳುಹಿಸಿ, ಶಿಶುವಾಗಿರುವಾಗಲೇ ಈ ಪರಿಯಾದ ಅನೇಕ ಅದ್ಭುತ ಲೀಲೆಗಳಿಂದ ತನ್ನ ಮಹಿಮೆಯನ್ನು ಪ್ರದರ್ಶಿಸಿ, ಶ್ರೀಕೃಷ್ಣನು ನಂದಾದಿಗಳನ್ನು ಮೋದಗೊಳಿಸಿದನು.

ಮೂರನೆಯ ತಿಂಗಳಿನಲ್ಲಿ ಬಾಣಂತಿಯು ಮಗುವಿನೊಡನೆ ದೇವರ ಗುಡಿಗೆ ಹೋಗಿಬರುವ ಸಂಪ್ರದಾಯದಂತೆ ಯಶೋದಾದೇವಿಯು ಮಗನೊಡನೆ ದೇವರ ದರ್ಶನಕ್ಕಾಗಿ ಹೋಗಿಬರುವ ಉತ್ಸವ ಕಾಲದಲ್ಲಿ ರಥದ ಬುಡದಲ್ಲಿ ಕೃಷ್ಣನನ್ನು ಮಲಗಿಸಿ, ಬಂಧುಜನರೊಡನೆ ಸಂತೋಷಮಗ್ನಳಾಗಿರಲು, ಅವಳಿಗೆ ತಿಳಿಯದಂತೆಯೇ ತನ್ನ ಪಾದಗಳಿಂದ ರಥದ ಚಕ್ರಗಳನ್ನು ಕೆಡವಿ, ಆ ಚಕ್ರದಲ್ಲಿ ಅಡಗಿದ್ದ ಶಕಟನೆಂಬ ದೈತ್ಯನು ತನ್ನನ್ನು ಕೊಲ್ಲಲು ಬರಲು ಅವನನ್ನು ಪಾದಾಹತಿಗಳಿಂದ ಸಂಹರಿಸಿ, ಶಿಶುರೂಪಿಯಾದ ಶ್ರೀಕೃಷ್ಣನು ಸರ್ವರನ್ನೂ ವಿಸ್ಮಯಾನಂದಗೊಳಿಸಿದನು.

ಮುಂದೆ ಮತ್ತೊಂದು ದಿನ ಯಶೋದೆಯ ತೊಡೆಯಮೇಲೆ ಆಡುತ್ತಿರುವಾಗ ಇದ್ದಕ್ಕಿದ್ದಂತೆಯೇ ಬಹು ಭಾರವನ್ನು ಪ್ರದರ್ಶಿಸಲು, ಯಶೋದೆಯು ''ಅಬ್ಬ! ಇದೇನು, ಕೃಷ್ಣನು ಇಷ್ಟು ಭಾರವಾಗಿದ್ದಾನಲ್ಲ!'' ಎಂದು ಅಚ್ಚರಿಯಿಂದ ಕೃಷ್ಣನನ್ನು ನೆಲದ ಮೇಲೆ ಕೂಡಿಸಿದಳು. ಅದೇ ಸಮಯದಲ್ಲಿ ಕಂಸನಿಂದ ಪ್ರೇರಿತನಾದ ತೃಣಾವರ್ತನೆಂಬ (ಸುಂಟರಗಾಳಿಯ ರೂಪದಿಂದ ಬಂದ ಅಸುರನು) ದೈತ್ಯನು ಧೂಳಿನಿಂದ ಎಲ್ಲರ ಕಣ್ಣುಗಳೂ ಮುಚ್ಚುವಂತೆ ಮಾಡಿ ಸಕಲ ದಿಕ್ಕುಗಳನ್ನೂ ಶಬ್ದಾಯಮಾನವಾಗಿ ಮಾಡುತ್ತಾ ಬಂದು ಶ್ರೀಕೃಷ್ಣನನ್ನು ಅಂತರಿಕ್ಷಕ್ಕೆ ಹಾರಿಸಿಕೊಂಡು ಹೋದನು. ಆಗ ಕೃಷ್ಣನು ಅಂಬರದಲ್ಲಿಯೇ ತೃಣಾವರ್ತನ ಕುತ್ತಿಗೆಯನ್ನು ಹಿಡಿದು ತಿರುವಿ, ಒಂದು ದೊಡ್ಡ ಕಲ್ಲುಬಂಡೆಯ ಮೇಲೆ ಅವನನ್ನು ಕೆಡವಿ ಸಂಹರಿಸಿದನು. ಶ್ರೀಕೃಷ್ಣನು ಇಂತು ಅನಂತ ಬಾಲಲೀಲೆಗಳಿಂದ ತಾನು ಅಂತವಿಲ್ಲದ ಮಹಾಮಹಿಮನೆಂಬುದನ್ನು ಪ್ರಕಟಗೊಳಿಸುತ್ತಾ ಸಕಲರನ್ನೂ ಸಂತಸಗೊಳಿಸಿದನು. ಇಂತಹ ಮಹಾಪ್ರಭುವಾದ ಸಿರಿಕೃಷ್ಣನು ನಮ್ಮನ್ನು ರಕ್ಷಿಸಲಿ ಎಂದು ಶ್ರೀ ಗುರುಸಾರ್ವಭೌಮರು ಪ್ರಾರ್ಥಿಸಿದ್ದಾರೆ.

**ಅಲಂಕಾರಗಳು :-** ಇಲ್ಲಿ ಸಮರ್ಥಿಸಬೇಕಾದ ಅರ್ಥವನ್ನು ಸಮರ್ಥಿಸಿರುವುದರಿಂದ ''ಕಾವ್ಯಲಿಂಗ'' ಎಂಬ ಅಲಂಕಾರವಿದೆ.

**ಲಕ್ಷಣ :-** ''ಕಾವ್ಯಲಿಂಗಂ ಸಮರ್ಥ್ಯಾರ್ಥಸಮರ್ಥನಮುದೀರ್ಯತೇ ।''

**ಉದಾ :-** ಜಯೀಂದ್ರೋ ಯದಯಂ ಸ್ವರ್ಧಾಮದ್ಧಾತ್ಯಜತಪಂಡಿತಾಃ ॥ **-ಅಲಂಕಾರ ಮಂಜರೀ.**

ವೃತ್ತ :- ಇದು 'ಸ್ರಗ್ಧರಾ' ವೃತ್ತದ ಪದ್ಯವು.

ಲಕ್ಷಣ :- ಮ್ರಭ್ನೈರ್ಯಾನಾಂ ತ್ರಯೇಣ ತ್ರಿಮುನಿ ಯತಿಯುತಾ ಸ್ರಗ್ಧರಾ ಕೀರ್ತಿತೇಯಮ್ ॥ ''

ಇಲ್ಲಿ 'ಅವತಾತ್' ಎಂಬುದು ಕ್ರಿಯಾಪದ. ಇದು ''ಅವ ರಕ್ಷಣೆ'' ಎಂಬ ಧಾತುವಿನ ಸಕರ್ಮಕ ಕರ್ತರಿ ಲೋಟ್ ಪರಸ್ಮೈಪದಿ ಪ್ರಥಮಪುರುಷ ಏಕವಚನದ ರೂಪ.

| | | | |
|---|---|---|---|
| ಪ್ರಯೋಗ :- | ಅವತು, ಅವತಾತ್, | ಅವತಾಂ | ಅವಂತು |
| | ಅವ, ಅವತಾತ್, | ಅವತಂ | ಅವತ |
| | ಅವಾನಿ, | ಅವಾದ | ಅವಾಮ ॥ 1 ॥ |

**ಯೋ ಮಾತುರ್ಜೃಂಭಮಾಣೋ ಜಗದಿದಮಖಿಲಂ ದರ್ಶಯನ್ನಂಕರೂಢೋ**
**ಗರ್ಗೇಣಾಚೀರ್ಣನಾಮಾ ಕೃತರುಚಿರಮಹಾಬಾಲಲೀಲೋ ವಯಸ್ಯೈಃ ।**
**ಗೋಪೀಗೇಹೇಷು ಭಾಂಡಸ್ಥಿತಮುರುದಯಯಾ ಕ್ಷೀರದಧ್ಯಾದಿ ಮುಷ್ಣನ್**
**ಮೃನ್ನಾಭಕ್ಷೀತಿ ಮಾತುಃ ಸ್ವವದನ ಜಗದ್ಭಾಸಯನ್ ಭಾಸತಾಂ ಮೇ ॥ 2 ॥**

**ಅನ್ವಯಾರ್ಥ :-** ಯಃ = ಯಾವ ಕೃಷ್ಣನು, ಮಾತುಃ = ತಾಯಿಯಾದ ಯಶೋದೆಯ - ಅಂಕರೂಢಃ = ತೊಡೆಯಲ್ಲಿ ಕುಳಿತವನಾಗಿ, ಜೃಂಭಮಾಣಃ = ಆಕಳಿಸುತ್ತಿರುವಾಗ, ತಾಯಿಯು 'ಬೇಡ ಕೃಷ್ಣ' ಎಂದು ಮುಖವನ್ನು ಹಿಡಿದು ಲಾಲಿಸುತ್ತಿರುವಾಗ, ಅಖಿಲಂ = ಸಪ್ತಸಮುದ್ರ, ಪಂಚ ಮಹಾಭೂತ, ಸ್ಥಾವರ ಜಂಗಮಾದಿಗಳಿಂದ ಕೂಡಿದ, ಜಗತ್ = ಭೂಮಂಡಲವನ್ನು, ದರ್ಶಯನ್ = ತಾಯಿಗೆ ತೋರಿಸಿ. ಗರ್ಗೇಣ = ಗರ್ಗಾಚಾರ್ಯರಿಂದ, ಆಚೀರ್ಣ-ನಾಮಾ = ಬಲರಾಮ ಸಹಿತನಾಗಿ ನಾಮಕರಣ ಮಾಡಿಸಿಕೊಂಡು, ಕೃತರುಚಿರಮಹಾಬಾಲಲೀಲಃ – ಕೃತ = ಮಾಡಲ್ಪಟ್ಟ, ರುಚಿರ = ಮನೋಹರವಾದ, ಮಹಾಬಾಲಲೀಲಃ = ಉತ್ತಮ ಬಾಲಕ್ರೀಡೆಯುಳ್ಳವನಾಗಿ, ವಯಸ್ಯೈಃ = ಸಮಾನ ವಯಸ್ಕರಾದ ಗೋಪ ಬಾಲಕರೊಡನೆ ಕೂಡಿ, ಗೋಪೀಗೇಹೇಷು = ಗೋಪಸ್ತ್ರೀಯರ ಮನೆಗಳಲ್ಲಿ, ಭಾಂಡಸ್ಥಿತಂ = ಪಾತ್ರೆಗಳಲ್ಲಿರುವ, ಕ್ಷೀರ ದಧ್ಯಾದಿ = ಹಾಲು ಮೊಸರು ಬೆಣ್ಣೆಗಳನ್ನು, ಉರುದಯಯಾ = ಗೋಪಸ್ತ್ರೀಯರನ್ನು ಉದ್ಧರಿಸಬೇಕೆಂಬ ಹೆಚ್ಚಾದ ಕೃಪೆಯಿಂದ, ಮುಷ್ಣನ್ = ಅಪಹರಿಸಿ, ಮೃತ್ = ಮಣ್ಣು, ನಾಭಕ್ಷಿ = ತಿನ್ನಲ್ಪಟ್ಟಿಲ್ಲ, ಇತಿ = ಹೀಗೆಂದು, ಮಾತುಃ = ತಾಯಿಯಾದ ಯಶೋದಾದೇವಿಗೆ, ಸ್ವವದನ ಜಗತ್ = ಸ್ವ = ತನ್ನ, ವದನ = ಬಾಯಿಯಲ್ಲಿರುವ ಜಗತ್ = ಪ್ರಪಂಚವನ್ನು, ಭಾಸಯನ್ = ತೋರಿಸಿದ, ಸಃ = ಅಂತಹ ಶ್ರೀಕೃಷ್ಣನು, ಮೇ = ನನಗೆ, ಭಾಸತಾಂ = ಸರ್ವ ವಿಷಯಕ ಜ್ಞಾನಪ್ರದನಾಗಲಿ.

**ವಿಗ್ರಹವಾಕ್ಯ:-** ಅಂಕೇ ರೂಢಃ ಅಂಕರೂಢಃ । ಆಚೀರ್ಣಂ ನಾಮಯಸ್ಯ ಸಃ ಆಚೀರ್ಣ ನಾಮಾ । ಬಾಲಾನಾಂ ಲೀಲಾಃ ಬಾಲಲೀಲಾಃ, ಮಹತ್ಯಶ್ಚತಾಃ ಬಾಲಲೀಲಾಶ್ಚ ಮಹಾಬಾಲಲೀಲಾಃ, ರುಚಿರಾಶ್ಚತಾಃ ಮಹಾಬಾಲಲೀಲಾಶ್ಚ ರುಚಿರಮಹಾಬಾಲ ಲೀಲಾಃ ಕೃತಾಃ ರುಚಿರಮಹಾಬಾಲಲೀಲಾ ಯೇನ ಸಃ – ಕೃತರುಚಿರಮಹಾಬಾಲ ಲೀಲಃ । ಗೋಪೀನಾಂ ಗೇಹಾನಿ ಗೋಪೀಗೇಹಾನಿ, ತೇಷು ಗೋಪೀಗೇಹೇಷು । ಭಾಂಡೇಷು ಸ್ಥಿತಂ ಭಾಂಡಸ್ಥಿತಂ, ತತ್ । ಉರ್ವೀ ಚ ಸಾ ದಯಾಚ ಉರುದಯಾ, ತಯಾ । ಕ್ಷೀರಂಚ ದಧಿಚ ಕ್ಷೀರದಧಿನೀ, ಕ್ಷೀರದಧಿನೀ ಆದಿನೀ ಯಸ್ಯ ತತ್ ಕ್ಷೀರ ದಧ್ಯಾದಿ, ತತ್ ಕ್ಷೀರ ದಧ್ಯಾದಿ । ಸ್ವಸ್ಯವದನಂ ಸ್ವವದನಂ, ಸ್ವವದನೇ ಜಗತ್ ಸ್ವವದನಜಗತ್, ತತ್ ಸ್ವವದನಜಗತ್ ॥

**ತಾತ್ಪರ್ಯ :-** ಶ್ರೀ ಕೃಷ್ಣನು ಒಂದಾನೊಂದು ದಿನ ತಾಯಿಯಾದ ಯಶೋದಾದೇವಿಯ ತೊಡೆಯಮೇಲೆ ಕುಳಿತು ಸ್ತನ್ಯಪಾನ ಮಾಡುತ್ತಾ, ತನ್ನನ್ನು ಮಗನೆಂದು ತಿಳಿದು ಲಾಲಿಸುತ್ತಿರುವ ತಾಯಿಗೆ ತಾನು ಸರ್ವೋತ್ತಮ ದೇವತೆಯೆಂದು ತಿಳಿಸಿ ಕೊಡಲು ತನ್ನ ಪುಟ್ಟದಾದ ಬಾಯಿ ತೆರೆದು ಅಲ್ಲಿರುವ ಸಪ್ತದ್ವೀಪ – ಸಪ್ತಸಮುದ್ರ – ಪಂಚ ಮಹಾಭೂತಗಳು – ಸ್ಥಾವರ ಜಂಗಮಾತ್ಮಕವಾದ ಜಗತ್ತನ್ನು ತೋರಿಸಿ, ಅಚ್ಚರಿಗೊಳಿಸಿದನು. ಮುಂದೆ ಕೆಲದಿನಗಳ ತರುವಾಯ ವಸುದೇವನಿಂದ ಪ್ರಾರ್ಥಿತರಾದ ಗರ್ಗಾಚಾರ್ಯರಿಂದ ಬಲರಾಮ ಸಹಿತನಾಗಿ ನಾಮಕರಣ ಮಹೋತ್ಸವವನ್ನು ನೆರವೇರಿಸಿಕೊಂಡು, ವಯೋನುಸಾರವಾಗಿ ಅಂಬೆಗಾಲಿಟ್ಟು ನಡೆಯುವುದು, ಪುಟ್ಟ ಪುಟ್ಟ ಹೆಜ್ಜೆಗಳನ್ನು ಇಡುತ್ತಾ ನಡೆಯುವುದೇ ಮೊದಲಾದ ಬಾಲಲೀಲೆಗಳಿಂದ ತಾಯಿ ತಂದೆ, ಬಂಧು – ಬಾಂಧವರನ್ನು ಆನಂದಗೊಳಿಸುತ್ತಾ, ಸಮಾನ ವಯಸ್ಸಿನ ಗೆಳೆಯ–ರಿಂದೊಡಗೂಡಿ ಕೋಪರಹಿತರಾದ ಗೋಪಸ್ತ್ರೀಯರಲ್ಲಿ ಅನುಗ್ರಹ ಮಾಡಬೇಕೆಂಬ ಕೃಪೆಯಿಂದಲೂ, ಕೋಪಾವಿಷ್ಟರಾದ ಸ್ತ್ರೀಯರು ತಮ್ಮ ಯೋಗ್ಯತೆಯನ್ನು ಮೀರಿ ಗಳಿಸಿದ ಪುಣ್ಯವನ್ನು ಪರಿಹರಿಸಲೂ ಸಹ ಅನೇಕ ಉಪಾಯಗಳಿಂದ ಹಾಲು, ಮೊಸರು, ಬೆಣ್ಣೆಗಳನ್ನು ಚೌರ್ಯಮಾಡಿ, ತಾನು ಜಗತ್ತಿನ ಇತರ ಮಾನವರಂತೆ (ಲೋಕ ಸಾಧಾರಣನೆಂದು) ಎಂದು ತಿಳಿದುಕೊಂಡಿರುವ ತಾಯಿ ಯಶೋದಾದೇವಿಗೆ ಮತ್ತೊಮ್ಮೆ ತಾನು ಸರ್ವೋತ್ತಮನೆಂದು ತಿಳಿಸಿಕೊಡಲು ಮಣ್ಣು ತಿಂದವನಂತೆ ನಟಿಸಿ, ಅದನ್ನು ಕಂಡ ಸ್ನೇಹಿತರಾದ ಗೋಪಾಲಕರು ಆ ವಿಚಾರವನ್ನು ಯಶೋದೆಗೆ ತಿಳಿಸಿದಾಗ ಯಶೋದೆಯು ಕುಪಿತಳಾಗಿ – ''ಕೃಷ್ಣ ಏಕೆ ಮಣ್ಣನ್ನು ತಿಂದೆ?'' ಎಂದು ಗದರಿಸಲು ಶ್ರೀ ಕೃಷ್ಣನು ನಸುನಗುತ್ತಾ ''ಅಮ್ಮ, ನಾನು ಮಣ್ಣು ತಿಂದಿಲ್ಲ, ಬೇಕಾದರೆ ನೋಡು!'' ಎಂದು ಹೇಳಿ ಬಾಯಿ ತೆರೆದು ಅಲ್ಲಿ ಸಪ್ತದ್ವೀಪಾದಿ ಭೂಗೋಲ ಸಹಿತವಾದ ಜಗತ್ತನ್ನು ತೋರಿಸಿ, ತತ್ತ್ವಜ್ಞಾನವನ್ನು ಬೋಧಿಸಿ, ತಾಯಿಯನ್ನೂ ಮತ್ತಿತರ ಬಾಂಧವರನ್ನೂ ಆನಂದ–ಗೊಳಿಸಿದನು. ಇಂತಹ ಶ್ರೀಕೃಷ್ಣ ಪರಮಾತ್ಮನು ನಮಗೆ ತತ್ತ್ವಜ್ಞಾನವನ್ನುಂಟು ಮಾಡಲಿ.

**ಅಲಂಕಾರಗಳು :-** ಇಲ್ಲಿಯೂ ''ಕಾವ್ಯಲಿಂಗಾಲಂಕಾರ'' ವು.

**ವೃತ್ತ :-** ಸ್ರಗ್ಧರಾ.

ಇಲ್ಲಿ 'ಅಭಕ್ಷಿ' 'ಭಾಸತಾಂ' ಎಂದು ಎರಡು ಕ್ರಿಯಾಪದಗಳಿವೆ.

''ಭಕ್ಷ – ಅದನೇ'' ಎಂಬ ಧಾತುವಿನ ಕರ್ಮಣಿ ಲುಙ್ ಆತ್ಮನೇಪದಿ ಪ್ರಥಮ ಪುರುಷ ಏಕವಚನದ ರೂಪ ''ಅಭಕ್ಷಿ'' ಎಂದಾಗಿದೆ.

| | | | |
|---|---|---|---|
| **ರೂಪ :-** | ಅಭಕ್ಷಿ | ಅಭಕ್ಷಿಷಾತಾಂ | ಅಭಕ್ಷಿಷತ |
| | ಅಭಕ್ಷಿಷ್ಠಾಃ | ಅಭಕ್ಷಿಷಾಥಾಂ | ಅಭಕ್ಷಿಢ್ವಂ |
| | ಅಭಕ್ಷಿಷಿ | ಅಭಕ್ಷಿಷ್ವಹಿ | ಅಭಕ್ಷಿಸ್ಮಹಿ ॥ |

"ಭಾಸ – ದೀಪ್ತೌ" ಎಂಬ ಧಾತುವಿನ ಸಕರ್ಮಕ ಕರ್ತರಿ ಲೋಟ್ ಆತ್ಮನೇಪದಿ ಪ್ರಥಮ ಪುರುಷ ಏಕವಚನದಲ್ಲಿ 'ಭಾಸತಾಂ' ಎಂದಾಗಿದೆ.

| | | | |
|---|---|---|---|
| ರೂಪ :- | ಭಾಸತಾಂ | ಭಾಸೇತಾಂ | ಭಾಸಂತಾಂ |
| | ಭಾಸಸ್ವ | ಭಾಸೇಥಾಂ | ಭಾಸಧ್ವಂ |
| | ಭಾಸೈ | ಭಾಸಾವಹೈ | ಭಾಸಾಮಹೈ ॥ ॥ 2 ॥ |

**ಧಧ್ನೋಽಮತ್ರಸ್ಯ ಭಂಗಾದುಪಗಮಿತರುಷಾ ನಂದಪತ್ನ್ಯಾಽಥ ಬದ್ಧಃ**
**ಕೃಚ್ಛ್ರೇಣೋಲೂಖಲೇ ಯೋ ಧನಪತಿತನಯೌ ಮೋಚಯಾಮಾಸ ಶಾಪಾತ್ ।**
**ನಂದಾದ್ಯೈಃ ಪ್ರಾಪ್ಯ ವೃಂದಾವನಮಿಹ ರಮಯನ್ ವೇಣುನಾದಾದಿಭಿರ್ಯೋ**
**ವತ್ಸಾನ್ಪಾನ್ವತ್ಸರೂಪಂ ಕ್ರತುಭುಗರಿಮಥೋ ಪೋಥಯನ್ ಸೋಽವತಾನ್ಮಾಮ್ ॥ 3 ॥**

**ಅನ್ವಯಾರ್ಥ** :- ಯಃ = ಯಾವ ಕೃಷ್ಣನು, ದಧ್ನೋಽಮತ್ರಸ್ಯ = ಮೊಸರು ತುಂಬಿದ ಪಾತ್ರೆಯ, ಭಂಗಾತ್ = ಒಡೆಯುವುದರಿಂದ, ಉಪಗಮಿತರುಷಾ = ಉಂಟಾದ ಕೋಪವುಳ್ಳ (ಕೋಪಗೊಂಡ), ನಂದಪತ್ನ್ಯಾ = ನಂದಗೋಪನ ಪತ್ನಿಯಾದ ಯಶೋದಾ ದೇವಿಯಿಂದ, ಅಥ = ಅನಂತರದಲ್ಲಿ, ಉಲೂಖಲೇ = ಒರಳಿನಲ್ಲಿ, ಕೃಚ್ಛ್ರೇಣ = ಕಷ್ಟದಿಂದ, ಬದ್ಧಃ = ಹಗ್ಗದಿಂದ ಕಟ್ಟಲ್ಪಟ್ಟವನಾಗಿ, ಧನಪತಿತನಯೌ = ಕುಬೇರ ಕುಮಾರರನ್ನು, ಶಾಪಾತ್ = ನಾರದ ಮುನಿಗಳ ಶಾಪದಿಂದ, ಮೋಚಯಾಮಾಸ = ಬಿಡಿಸಿದನೋ, ನಂದಾದ್ಯೈ = ನಂದಗೋಪ – ಉಪನಂದ ಮೊದಲಾದವ-ರೊಡಗೂಡಿ, ಬೃಂದಾವನಂ – ಬೃಂದಾವನವೆಂಬ ಪ್ರದೇಶವನ್ನು, ಪ್ರಾಪ್ಯ = ಹೊಂದಿ, ಇಹ = ಈ ಬೃಂದಾವನದಲ್ಲಿ, ವೇಣುನಾದಾದಿಭಿಃ = ಮುರಳೀನಾದಾದಿ ವ್ಯಾಪಾರಗಳಿಂದ, ರಮಯನ್ = ಕ್ರೀಡಿಸುವವನಾಗಿ, ವತ್ಸಾನ್ = ಕರುಗಳನ್ನು, ಪಾನ್ = ರಕ್ಷಿಸುವವನಾಗಿ, ವತ್ಸರೂಪಂ = ಕರುವಿನಂತೆ ರೂಪವನ್ನು ಧರಿಸಿದ್ದ, ಕ್ರತುಭುಗರಿಂ = ದೇವತೆಗಳಿಗೆ ಶತ್ರುವಾದ ದೈತ್ಯನನ್ನು, ಪೋಥಯನ್ = ಅರೆದು ಕೊಂದುಹಾಕಿದನೋ, ಸಃ = ಅಂತಹ ಶ್ರೀಕೃಷ್ಣನು, ಮಾಂ = ನನ್ನನ್ನು, ಅವತಾತ್ = ರಕ್ಷಣೆಮಾಡಲಿ.

**ವಿಗ್ರಹವಾಕ್ಯ** :- ಉಪಗಮಿತಾ ರುಟ್ ಯಸ್ಯಾಸ್ಸಾ ಉಪಗಮಿತರುಟ್, ತಯಾ ಉಪಗಮಿತರುಷಾ । ನಂದಸ್ಯ ಪತ್ನೀ ನಂದಪತ್ನೀ, ತಯಾ ನಂದಪತ್ನ್ಯಾ । ಧನಸ್ಯಪತಿಃ, ಧನಪತೇಃ ತನಯೌ ಧನಪತಿತನಯೌ, ತೌ । ರಮಯತೀತಿ ರಮಯನ್ । ವೇಣೋಃ ನಾದಃ ವೇಣುನಾದಃ ಸಃ ಆದ್ಯಃ ಯೇಷಾಂ ತೇ, ವೇಣುನಾದಾದ್ಯಾಃ, ತೈಃ । ವತ್ಸಸ್ಯ ರೂಪಮಿವರೂಪಂ ಯಸ್ಯ ಸಃ ವತ್ಸರೂಪಃ, ತಮ್ । ಕ್ರತುಂ ಭುಂಜತ, ಇತಿ ಕ್ರತುಭುಜಃ, ಕ್ರತುಭುಜಾಂ ಅರಿಃ ಕ್ರತುಭುಗರಿಃ, ತಂ ಕ್ರತುಭುಗರಿಮ್ ॥

**ತಾತ್ಪರ್ಯ** :- ಶ್ರೀಕೃಷ್ಣನು ಒಂದಾನೊಂದು ದಿವಸ ಮೊಸರನ್ನು ಕಡೆಯುತ್ತಾ ತನ್ನ ಚರಿತ್ರೆಗಳನ್ನು ಗಾನ ಮಾಡುತ್ತಿದ್ದ ತಾಯಿಯ ತೊಡೆಯ ಮೇಲೆ ಕುಳಿತು ಸ್ತನ್ಯ ಪಾನಮಾಡುತ್ತಿರಲು, ಹಾಲು ಉಕ್ಕುವುದೆಂದು ತಾಯಿಯಾದ ಯಶೋದಾ ದೇವಿಯು ಕೃಷ್ಣನನ್ನು ಕೆಳಗೆ ಕುಳ್ಳಿರಿಸಿ ಹಾಲನ್ನು ಒಲೆಯ ಮೇಲಿನಿಂದ ಇಳಿಸಲು ಹೋಗಲು, ಕೋಪದಿಂದ ಮೊಸರಿನ ಭಾಂಡೆ (ಗಡಿಗೆ) ಯನ್ನು ಕಲ್ಲಿನಿಂದ ಒಡೆದು ಚಂದ್ರನಂತೆ ಬೆಳ್ಳಗಿರುವ ಬೆಣ್ಣೆಯನ್ನು ತೆಗೆದುಕೊಂಡು ಏಕಾಂತ ಸ್ಥಳದಲ್ಲಿ ಒರಳಿನ ಮೇಲೆ ನಿಂತು ಬೆಕ್ಕುಗಳಿಗೆ ಬೆಣ್ಣೆಯನ್ನು ಉಣಿಸುತ್ತಾ ತಾನೂ ಬೆಣ್ಣೆಯನ್ನು ಭಕ್ಷಿಸುತ್ತಿದ್ದನು. ಯಶೋದಾ ದೇವಿಯು

ಹಾಲಿನ ಪಾತ್ರೆಯನ್ನು ಕೆಳಗಿಳಿಸಿ ಬಂದು ಮೊಸರಿನ ಪಾತ್ರೆಯು ಒಡೆದಿರುವುದನ್ನು ಗಮನಿಸಿ 'ಇದು ಕೃಷ್ಣನ ಕೆಲಸವೇ!' ಎಂದು ನಿಶ್ಚಯಿಸಿ ಸಿಟ್ಟಿನಿಂದ ಅಲ್ಲಿಯೇ ಬಿದ್ದಿದ್ದ ಒಂದು ದಂಡವನ್ನು (ಕೋಲನ್ನು) ತೆಗೆದುಕೊಂಡು ಕೃಷ್ಣನನ್ನು ಹೊಡೆಯಬೇಕೆಂದು ಕೋಪದಿಂದ ಕೃಷ್ಣನನ್ನು ಹುಡುಕುತ್ತಾ ಬಂದಳು. ಕುಪಿತಳಾಗಿ ದಂಡ ಹಸ್ತಳಾಗಿ ಬರುತ್ತಿರುವ ತಾಯಿಯನ್ನು ನೋಡಿ, ಒರಳಿನ ಮೇಲಿಂದ ಕೆಳಗೆ ಹಾರಿ ಭಯಪಟ್ಟವನಂತೆ ನಟಿಸಿ, ತಾಯಿಯು ಅಟ್ಟಿಸಿಕೊಂಡು ಬರಲು ಬಹುದೂರ ಓಡಿಹೋಗಿ, ನಂತರ ತಾಯಿಯು ತನ್ನನ್ನು ಹಿಡಿಯಲಾಗದೆ ಶ್ರಮ ಪಡುತ್ತಿರುವುದನ್ನು ಕಂಡು ತಾನು ಭಕ್ತರಿಗೆ ವಶನೆಂದು ತಾಯಿಗೆ ತೋರಿಸಲು ಅವಳ ಕೈಗೆ ಸಿಕ್ಕು, ಅವಳು ತಾನು ಮಾಡಿದ ಅಪರಾಧಕ್ಕಾಗಿ ಹಗ್ಗದಿಂದ ಕಟ್ಟಲು ಯತ್ನಿಸಲು ಎಷ್ಟೆಷ್ಟು ಹಗ್ಗಗಳನ್ನು ತಂದು ಕಟ್ಟಲೆತ್ನಿಸಿದರೂ ಸ್ವಲ್ಪ ಸಾಲದಂತೆ ಕಡಿಮೆಯಾಗುತ್ತಿರಲು ಆಯಾಸವಾಗ-ಬಾರದೆಂದೂ ಒಂದೇ ಒಂದು ಸಣ್ಣ ಕರುವಿನ ಹಗ್ಗದಿಂದಲೇ ಒರಳಿಗೆ ಕಟ್ಟಲ್ಪಟ್ಟವನಾಗಿ, ಒರಳನ್ನು ಎಳೆಯುತ್ತಾ ಯಮಳಾರ್ಜುನ ವೃಕ್ಷಗಳ ಮಧ್ಯದಲ್ಲಿ ಪ್ರವೇಶಮಾಡಿ ಆ ಒರಳಿನ ಆಘಾತದಿಂದ ವೃಕ್ಷಗಳನ್ನು ಕೆಡವಿ, ಅಲ್ಲಿರತಕ್ಕ ನಳಕೂಬರರೆಂಬ ಕುಬೇರ ಪುತ್ರರನ್ನು ಶಾಪದಿಂದ ವಿಮೋಚನಗೊಳಿಸಿದನು. ಹಿಂದೆ ಕೈಲಾಸ ಪರ್ವತದ ಉಪವನದಲ್ಲಿ ಗಂಗಾನದಿಯಲ್ಲಿ ವಿವಸ್ತ್ರರಾಗಿ ಈ ನಳಕೂಬರರು ಯುವತಿಯರೊಡನೆ ಕ್ರೀಡಾಸಕ್ತರಾಗಿರುವುದನ್ನು ಕಂಡು ಕುಪಿತರಾದ ದೇವರ್ಷಿ ನಾರದರು ''ವೃಕ್ಷರೂಪಿಗಳಾಗಿರಿ'' ಎಂದು ಶಾಪ ಕೊಟ್ಟಿದ್ದರು. ಅಂಥ ಕುಬೇರಪುತ್ರರಾದ ನಳಕೂಬರರನ್ನು ಶ್ರೀಕೃಷ್ಣನು ಶಾಪದಿಂದ ವಿಮೋಚನೆಮಾಡಿ ಅವರನ್ನು ಕಳುಹಿಸಿದನು. ಅನಂತರ ನಂದಗೋಪನು ಬಂದು ಕೃಷ್ಣನನ್ನು ಬಂಧನದಿಂದ ಬಿಡಿಸಿದನು. ಹೀಗೆ ಶ್ರೀ ಕೃಷ್ಣನು ತನ್ನ ಅದ್ಭುತ ವ್ಯಾಪಾರಗಳಿಂದ ಸರ್ವರನ್ನೂ ಆನಂದಗೊಳಿಸಿದನು. ಕೆಲದಿನಗಳಾದ ಮೇಲೆ ಶ್ರೀಕೃಷ್ಣನು ವೃಂದಾವನಕ್ಕೆ ತೆರಳಲಪೇಕ್ಷಿಸಿ, ಗೋಕುಲದಲ್ಲಿ ವ್ಯಾಘ್ರ ಸಮಾನಗಳಾದ ತೋಳಗಳನ್ನು ಸೃಷ್ಟಿಸಿ, ಅವುಗಳಿಂದ ಪೀಡಿತರಾದ ಉಪನಂದಾದಿಗಳಿಂದ ಬೋಧಿತರಾದ ನಂದಗೋಪಾದಿಗಳಿಂದ ಕೂಡಿ ಬೃಂದಾವನಕ್ಕೆ ತೆರಳಿದನು. ಅಲ್ಲಿ ಬಲರಾಮನೊಡನೆ ವೇಣುನಾದಾದಿ ಕ್ರೀಡೆಗಳಿಂದ ಸಮವಯಸ್ಕರಾದ ಗೋಪಾಲ ಬಾಲಕರಿಂದ ಸಹಿತನಾಗಿ ಕರುಗಳನ್ನು ಆಟವಾಡಿಸುತ್ತಾ ಸಂಚಾರ ಮಾಡುತ್ತಿರಲು ಆಗ ತನ್ನನ್ನು ಕೊಲ್ಲಲು ಕರುವಿನ ರೂಪ ಧರಿಸಿ ಬಂದ ಕಂಸಭೃತ್ಯನಾದ ವತ್ಸಾಸುರನೆಂಬ ದೈತ್ಯನನ್ನು ಹಿಂಭಾಗದ ಎರಡು ಕಾಲುಗಳು ಮತ್ತು ಬಾಲವನ್ನು ಹಿಡಿದು ಕಪಿತ್ಥ ವೃಕ್ಷದಮೇಲೆ ಎಸೆದು ಕೆಳಗೆ ಕೆಡವಿ ವತ್ಸಾಸುರನನ್ನು ಸಂಹರಿಸಿದನು. ಇದರಿಂದ ಸುಪ್ರೀತರಾದ ದೇವತೆಗಳು ಕೃಷ್ಣನ ಮೇಲೆ ಪುಷ್ಪವೃಷ್ಟಿ ಮಾಡಿದರು. ಇಂಥ ಮಹಾಮಹಿಮನಾದ ಶ್ರೀಕೃಷ್ಣನು ನನ್ನನ್ನು ರಕ್ಷಿಸಲಿ ಎಂದು ಭಾವ.

**ಅಲಂಕಾರಗಳು**

ಇಲ್ಲಿ 'ಕಾವ್ಯಲಿಂಗ' ಮತ್ತು 'ಅಸಂಭವ' ಎಂಬ ಎರಡು ಅಲಂಕಾರಗಳಿವೆ. ಎರಡು ಅಲಂಕಾರಗಳಿರುವುದರಿಂದ ಸಂಕರವಾಗಿದೆ. ಅಸಂಭಾವಿತವಾದ ವಿಷಯವನ್ನು ಸಮರ್ಥಿಸಲು ದೈತ್ಯವಧ, ಉಲೂಖಲಾಕರ್ಷಣ, ವೃಕ್ಷದ್ವಯಭಂಗ, ನಳಕೂಬರರ ಶಾಪಮೋಚನ, ಮುಂತಾದ ಇತರಾಸಂಭಾವಿತ ವಿಷಯಗಳನ್ನು ವರ್ಣಿಸಿರುವುದರಿಂದ ಅಸಂಭವಾ-ಲಂಕಾರವು.

**ಲಕ್ಷಣ :-** ''ಅಸಂಭವೋರ್ಥನಿಷ್ಪತ್ತೇಃ ಅಸಂಭಾವ್ಯತ್ವವರ್ಣನಮ್ ।

**ದೃಷ್ಟಾಂತ :-** ''ಕೋವೇದಗೋಪಶಿಶುಕಃ ಶೈಲಮುತ್ಪಾಟಯೇದಿತಿ ॥

ಇಲ್ಲಿ ಮೋಚಯಾಮಾಸ ಎಂಬುದು ಕ್ರಿಯಾಪದ. ''ಮುಚ್ಲೃ – ಮೋಕ್ಷಣೇ'' ಎಂಬ ಧಾತುವಿನ ಣಿಜಂತ ಸಕರ್ಮಕ ಕರ್ತರಿ ಲಿಟ್ ಆತ್ಮನೇಪದಿ ಪ್ರಥಮಪುರುಷ ಏಕವಚನದಲ್ಲಿ ಮೋಚಯಾಮಾಸ ಎಂದಾಗಿದೆ.

| | | | |
|---|---|---|---|
| **ರೂಪ:-** | ಮೋಚಯಾಮಾಸ | ಮೋಚಯಾಮಾಸತುಃ | ಮೋಚಯಾಮಾಸುಃ |
| | ಮೋಚಯಾಮಾಸಿಥ | ಮೋಚಯಾಮಾಸಥುಃ | ಮೋಚಯಾಮಾಸ |
| | ಮೋಚಯಾಮಾಸ | ಮೋಚಯಾಮಾಸಿವ | ಮೋಚಯಾಮಾಸಿಮ ॥ 3 ॥ |

**ರಕ್ಷನ್ ವತ್ಸಾನ್ವಯಸ್ಯೈರ್ಬಕಮಭಿನದಥೋ ತಿಗ್ಮತುಂಡೇ ಗೃಹೀತ್ವಾ**
**ಪ್ರೀತಿಂ ಕರ್ತುಂ ಸಖೀನಾಂ ಖರಮಪಿ ಬಲತೋ ಘಾತಯನ್ ಕಾಲಿಯಾಹಿಮ್ ।**
**ಉನ್ಮಥ್ಯೋದ್ವಾಸ್ಯ ಕೃಷ್ಣಾಮತಿವಿಮಲಜಲಾಂ ಯೋ ವ್ಯಧಾದ್ದಾವವಹ್ನಿಂ**
**ಸುಪ್ತಾನಾವೃತ್ಯ ಗೋಷ್ಠೇ ಸ್ಥಿತಮಪಿಬದಸೌ ದುಷ್ಟವೃಕ್ಷಚ್ಛಿದವ್ಯಾತ್ ॥ 4 ॥**

**ಅನ್ವಯಾರ್ಥ :-** ಯಃ = ಯಾವ ಕೃಷ್ಣನು, ಅಥೋ = ಅನಂತರದಲ್ಲಿ, ವಯಸ್ಯೈಃ = ಸಮಾನವಯಸ್ಕರಾದ ಬಾಲಕರಿಂದ (ಕೂಡಿ), ವತ್ಸಾನ್ = ಕರುಗಳನ್ನು, ರಕ್ಷನ್ = ಪಾಲನಮಾಡಿ, ತಿಗ್ಮತುಂಡೇ = ತೀಕ್ಷ್ಣವಾದ ಮುಖದ್ವಯವನ್ನು (ಚಂಚುದ್ವಯವನ್ನು), ಗೃಹೀತ್ವಾ = (ಕೈಗಳಿಂದ) ಹಿಡಿದು, ಬಕಂ = ಬಕ ರೂಪಿಯಾದ ದೈತ್ಯನನ್ನು, ಅಭಿನತ್ = ಸೀಳಿದನೋ, ಸಖೀನಾಂ = ಶ್ರೀದಾಮನೇ ಮೊದಲಾದ ತನ್ನ ಮಿತ್ರರಾದ ಗೋಪಾಲಕರುಗಳಿಗೆ, ಪ್ರೀತಿಂ = ಸಂತೋಷವನ್ನು, ಕರ್ತುಂ = ಮಾಡಲೋಸುಗ, ಬಲತಃ = ಬಲರಾಮನಿಂದ, ಖರಮಪಿ = ಗಾರ್ದಭ (ಕತ್ತೆ) ಸ್ವರೂಪನಾದ ಧೇನುಕಾಸುರನನ್ನು ಸಹ, ಘಾತಯನ್ = ಸಂಹಾರ ಮಾಡಿಸಿದವನಾಗಿ, ಕಾಲಿಯಾಹಿಂ = ಕಾಲಿಯನಾಮಕ ಸರ್ಪವನ್ನು, ಉನ್ಮಥ್ಯ = ಮಥನಮಾಡಿ (ಮರ್ದಿಸಿ), ಉದ್ವಾಸ್ಯ = ಯಮುನಾ ನದಿಯಿಂದ ಹೊರಗೆ ಹಾಕಿ, ಕೃಷ್ಣಾಂ = ಯಮುನಾನದಿಯನ್ನು, ಅತಿವಿಮಲಜಲಾಂ = ಅತ್ಯಂತ ನಿರ್ಮಲ ನೀರುಳ್ಳದ್ದಾಗಿ, ವ್ಯಧಾತ್ = ಮಾಡಿದನೋ, ಗೋಷ್ಠೇ = ಗೋವುಗಳನ್ನು ಕಟ್ಟುವ ಸ್ಥಳದಲ್ಲಿ, ಸುಪ್ತಾನ್ = ಮಲಗಿದ್ದ ಗೋಪಾಲಕರನ್ನು, ಆವೃತ್ಯ ಸ್ಥಿತಂ = ಸುತ್ತಲೂ ಆವರಿಸಿಕೊಂಡಿದ್ದ, ದಾವವಹ್ನಿಂ = ಕಾಡುಕಿಚ್ಚನ್ನು, ಅಪಿಬತ್ = ಪಾನಮಾಡಿದನೋ, ದುಷ್ಟವೃಕ್ಷಚ್ಛಿತ್ = ದುಷ್ಟನೂ ವೃಕ್ಷರೂಪಿಯೂ ಆದ ದೈತ್ಯನನ್ನು ಸಂಹರಿಸಿದ, ಅಸೌ = ಈ ಕೃಷ್ಣನು, ಅವ್ಯಾತ್ (ಮಾಮಿತಿ ಶೇಷಃ) – ನನ್ನನು ರಕ್ಷಣೆಮಾಡಲಿ.

**ವಿಗ್ರಹವಾಕ್ಯ :-** ತಿಗ್ಮೇ ಚ ತೇ ತುಂಡೇ ಚ ತಿಗ್ಮತುಂಡೇ, ತೇ । ಕಾಲಿಯಾಶ್ಚಾಸೌ ಅಹಿಶ್ಚ ಕಾಲಿಯಾಹಿಃ, ತಮ್ । ಅತ್ಯಂತಂ ವಿಮಲಂ ಅತಿ ವಿಮಲಂ ತಾ ದೃಶಂ ಜಲಂ ಯಸ್ಯಾಸ್ಸಾ ಅತಿವಿಮಲಜಲಾ, ತಾಮ್ । ದುಷ್ಟಶ್ಚಾಸೌ ವೃಕ್ಷಶ್ಚ ದುಷ್ಟವೃಕ್ಷಃ, ದುಷ್ಟವೃಕ್ಷಂ ಛಿನತ್ತೀತಿ ದುಷ್ಟವೃಕ್ಷಚ್ಛಿತ್ ॥

**ತಾತ್ಪರ್ಯ :-** ಲೀಲಾಮಾನುಷ ವಿಗ್ರಹನಾದ ಶ್ರೀಕೃಷ್ಣ ಪರಮಾತ್ಮನು ತನ್ನ ಅಮೋಘ ಬಾಲಲೀಲೆಗಳಿಂದ ನಂದಗೋಕುಲದ ಸುಜನವೃಂದವನ್ನು ಆನಂದಗೊಳಿಸುತ್ತಾ ಅದೇ ಲೀಲೆಗಳಿಂದಲೇ ಭೂಮಿಗೆ ಭಾರರಾದ ಅಯೋಗ್ಯ-ರಾದ ದೈತ್ಯರನ್ನು ಸಂಹರಿಸುತ್ತಾ ತಾನು ದೇವೋತ್ತಮನೆಂಬುದನ್ನು ತೋರಿಕೊಡುತ್ತಿದ್ದನು. ಶ್ರೀಕೃಷ್ಣ ಪರಮಾತ್ಮನ ಕೆಲವು ಅದ್ಭುತ ವ್ಯಾಪಾರಗಳನ್ನು ಈ ಪದ್ಯದಲ್ಲಿ ಶ್ರೀ ಗುರುಸಾರ್ವಭೌಮರು ಬಹು ಹೃದಯಂಗಮವಾಗಿ ವರ್ಣಿಸಿದ್ದಾರೆ. ಶ್ರೀ ಗುರುರಾಜರ ಆಶಯವನ್ನು ಅವರ ಪೂರ್ವಾಶ್ರಮ ಪುತ್ರರಾದ, ವಿದ್ವತ್ಕುಲಲಲಾಮರಾದ ಶ್ರೀ ಲಕ್ಷ್ಮೀನಾರಾಯಣಾ-ಚಾರ್ಯರು ತಮ್ಮ ವ್ಯಾಖ್ಯಾನದಲ್ಲಿ ಚೆನ್ನಾಗಿ ಪ್ರಕಟಗೊಳಿಸಿದ್ದಾರೆ. "ಅನೇನ" ಎಂದಾರಂಭಿಸಿ ಈ ಪದ್ಯದ ಭಾವವನ್ನು ಅವರು ಹೀಗೆ ನಿರೂಪಿಸುತ್ತಾರೆ.

ಒಂದು ದಿನ ಶ್ರೀಕೃಷ್ಣನು ತನ್ನ ಸಮಾನ ವಯಸ್ಸಿನ ಮಿತ್ರರಾದ ಗೋಪಾಲರಿಂದೊಡಗೂಡಿ ಕರುಗಳನ್ನು ಆಟವಾಡಿಸುತ್ತಾ ಅವುಗಳಿಗೆ ಜಲಪಾನ ಮಾಡಿಸುತ್ತಾ ಸಂತೋಷದಿಂದ ಸಂಚರಿಸುತ್ತಿದ್ದನು. ಆಗ ಷಣ್ಮುಖನ ವರವೆಂಬ ಕವಚವನ್ನು ತೊಟ್ಟು, ಆದ್ದರಿಂದಲೇ ಅನ್ಯರಿಂದ ಅವಧ್ಯನಾದ, ಕಂಸನ ಆಪ್ತಸೇವಕರಲ್ಲೊಬ್ಬನಾದ, ಬಕಪಕ್ಷಿಯ ರೂಪವುಳ್ಳ ದೈತ್ಯನು ಕೃಷ್ಣನನ್ನು ಸಂಹಾರ ಮಾಡಲು ಬಂದು ಭಕ್ಷಿಸಲು ಬಾಯಿ ತೆರೆದನು. ಆಗ ಕೃಷ್ಣನು ಅವನ ಮುಖದಲ್ಲಿ ಪ್ರವೇಶಿಸಿ ಅವನ ಕಂಠವನ್ನು ದಹಿಸಿ, ಅಲ್ಲಿಂದ ಹೊರಬಂದು ಬಕರೂಪಿಯಾದ ಆ ದೈತ್ಯನ ಎರಡು ಕೊಕ್ಕುಗಳನ್ನೂ ಹಿಡಿದು ಸೀಳಿ ದುಷ್ಟನಾದ ಆ ದೈತ್ಯನನ್ನು ಸಂಹರಿಸಿದನು.

ಮತ್ತೊಂದು ದಿನ ವಯೋನುಸಾರವಾಗಿ ಬಲರಾಮ, ಮತ್ತು ಶ್ರೀರಾಮನೇ ಮೊದಲಾದ ಸ್ನೇಹಿತರಿಂದ ಕೂಡಿ ಅಲ್ಲಲ್ಲಿ ವನಗಳಲ್ಲಿ ಗೋವುಗಳೊಡನೆ ಸಂಚರಿಸುತ್ತಾ ಒಂದು ವನಕ್ಕೆ ಬಂದನು. ಆ ವನವು ಗಾರ್ದಭಸ್ವರೂಪಿಯಾದ ಧೇನುಕಾಸುರನಿಗೆ ಸೇರಿದ ವನವಾಗಿತ್ತು. ಅವನಿಂದ ಅದು ರಕ್ಷಿತವಾಗಿತ್ತು. ಆ ವನದಲ್ಲಿ ವಿಶೇಷವಾಗಿ ತಾಳ ವೃಕ್ಷಗಳಿದ್ದವು. ತಾಳವೃಕ್ಷಗಳಲ್ಲಿ ಹೆಚ್ಚಾಗಿ ತಾಳಫಲಗಳು ಇದ್ದವು. ಶ್ರೀದಾಮ ಮೊದಲಾದ ಗೋಪಾಲರು ಆ ತಾಳಫಲಗಳನ್ನು ತಿನ್ನಬೇಕೆಂದು ಆಶಿಸಿ ಶ್ರೀಕೃಷ್ಣನನ್ನು ಪ್ರಾರ್ಥಿಸಿದರು. ಶ್ರೀಕೃಷ್ಣನು ಆನಂದದಿಂದ ಅವರಿಗೆ ಹಣ್ಣುಗಳನ್ನು ತಿನ್ನಿಸಿದನು. ಅಷ್ಟರಿಂದಲೇ ತೃಪ್ತನಾಗದ ಬಲರಾಮನು ತಾಳವೃಕ್ಷವನ್ನೇ ಹಿಡಿದು ಬಲವಾಗಿ ಅಲುಗಾಡಿಸಹತ್ತಿದನು. ವೃಕ್ಷದಿಂದ ಪಳಪಳನೆ ಹಣ್ಣುಗಳು ಬೀಳಲಾರಂಭಿಸಿದವು. ಆ ಶಬ್ದವನ್ನು ಕೇಳಿ ಕೋಪದಿಂದ ಧೇನುಕಾಸುರನು ಬಲರಾಮನನ್ನು ಕೊಲ್ಲಲು ಧಾವಿಸಿ ಬಂದನು. ವಿಘ್ನೇಶ್ವರನ ವರಬಲದಿಂದ ಬೇರೊಬ್ಬರಿಂದ ಸಂಹರಿಸಲಾಗದ ಆ ಧೇನುಕಾಸುರನನ್ನು ನೋಡಿ ಶ್ರೀಕೃಷ್ಣನು ಬಲರಾಮನಿಗೆ ಅವನನ್ನು ಸಂಹರಿಸಲು ಸೂಚಿಸಿದನು. ಬಲರಾಮನು ಲೀಲೆಯಿಂದಲೇ ಧೇನುಕಾಸುರನನ್ನು ಸಂಹಾರ ಮಾಡಿದನು. ಅನಂತರ ಹರ್ಷಗೊಂಡು ಸಕಲರೂ ಬೃಂದಾವನಕ್ಕೆ ಮರಳಿದರು.

ಕೆಲ ದಿನಗಳುರುಳಿದ ಮೇಲೆ ಇನ್ನೊಂದು ದಿವಸ ಯಮುನಾತೀರದಲ್ಲಿ ಗೋವು-ಕರುಗಳನ್ನು ಸಂಚಾರ ಮಾಡಿ-ಸುತ್ತಿದ್ದಾಗ ಗೋವುಗಳು ಯಮುನೆಯ ದಂಡೆಯ ವಿಶಾಲವಾದ ಬಯಲಿನಲ್ಲಿ ಬೆಳೆದಿದ್ದ ಹಚ್ಚನೆಯ ಹುಲ್ಲು ತಿಂದು ನೀರು ಕುಡಿಯಲು ಯಮುನೆಗೆ ಮುಖವೊಡ್ಡಿದವು. ಕಾಲಿಯ ಎಂಬ ಸರ್ಪರಾಜನ ವಿಷದಿಂದ ಆ ಜಲವು ದೂಷಿತವಾಗಿದ್ದಿತು. ಗೋವುಗಳು ಗೋಪಾಲಕರು ಅದನ್ನರಿಯದೇ ತೃಷಾರ್ತರಾಗಿ ಆ ನೀರನ್ನು ಕುಡಿದು ವಿಷಪ್ರಭಾವದಿಂದ ಮೂರ್ಛಿತರಾಗಿ ಬಿದ್ದರು. ಅದನ್ನು ನೋಡಿ ಶ್ರೀ ಕೃಷ್ಣನು ಅಮೃತವರ್ಷಿಗಳಾದ ತನ್ನ ನೇತ್ರಗಳಿಂದ ಅವರನ್ನು ವೀಕ್ಷಿಸಿ ಉಜ್ಜೀವನಗೊಳಿಸಿದನು. ಅನಂತರ ಅವರು ಮೂರ್ಛಿತರಾಗಲು ಕಾರಣವೇನೆಂದು ವಿಮರ್ಶಿಸಿ, ವಿಷಯವನ್ನರಿತು, ಕೋಪದಿಂದ ಕಾಲಿಯನನ್ನು ಶಿಕ್ಷಿಸಲು ನಿಶ್ಚಯಿಸಿ, ಅಲ್ಲಿದ್ದ ಕದಂಬ ವೃಕ್ಷವನ್ನೇರಿ ಸರ್ಪವಿದ್ದ ಮಡುವಿನಲ್ಲಿ ಧುಮುಕಿ, ಕಾಲಿಯ ಸರ್ಪವನ್ನು ತನ್ನ ಪಾದಗಳಿಂದ ಮರ್ದಿಸುತ್ತಿರಲು, ಭಯಗೊಂಡ ಕಾಲಿಯನು ಸಪತ್ನೀಕನಾಗಿ ತಮ್ಮನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿ ಕೃಷ್ಣನನ್ನು ಪೂಜಿಸಲು, ಅವನ ಪೂಜೆಯನ್ನು ಸ್ವೀಕರಿಸಿ, ಭಾರ್ಯಾಸಮೇತನಾದ ಕಾಲಿಯನನ್ನು ರಮಣಕ ದ್ವೀಪಕ್ಕೆ ಕಳುಹಿಸಿ ಕೊಟ್ಟು ಗೋಪಾಲಕರಿಂದ ಸ್ತುತ್ಯನಾದನು. ಇತ್ತ ಯಮುನಾ ನದಿಯ ಮಡುವಿನಲ್ಲಿ ಕೃಷ್ಣನು ಹಾರಿದ್ದರಿಂದ ಉಂಟಾದ ಉತ್ಪಾತಗಳಿಂದ ಭಯಗೊಂಡು ಕೃಷ್ಣನನ್ನು ಕಾಣಲು ಯಶೋದಾದೇವಿಯೇ ಮೊದಲಾದ ಸಕಲ ಜನರು ಯಮುನಾ ತೀರಕ್ಕೆ ಧಾವಿಸಿ ಬರಲು ಅವರನ್ನು ತನ್ನ ದರ್ಶನಾಲಾಪಾದಿಗಳಿಂದ ಆನಂದಗೊಳಿಸಿ ಅಂದು ರಾತ್ರಿ ಅಲ್ಲಿಯೇ ವಾಸ-ಮಾಡಿದನು.

ಅಂದು ರಾತ್ರಿ ಎಲ್ಲರೂ ಮಲಗಿ ನಿದ್ರಿಸುತ್ತಿರುವಾಗ ಭಯಂಕರ ಕಾಡುಕಿಚ್ಚು ಆವರಿಸಿ ಗೋಪಾಲಕರೇ ಆದಿಯಾಗಿ ಸಕಲರನ್ನೂ ಸುತ್ತುಗಟ್ಟಿ ಧಗಧಗನೆ ಪ್ರಜ್ವಲಿಸುತ್ತಿರುವುದನ್ನು ಕಂಡು ಶ್ರೀ ಕೃಷ್ಣನು ತನ್ನವರನ್ನು ಕಾಪಾಡಲು ಆ ದಾವಾಗ್ನಿ-

ಯನ್ನು ಸ್ವತಃ ಪಾನಮಾಡಿದನು. ಮರುದಿನ ಪ್ರಾತಃಕಾಲ ಅವರೆಲ್ಲರೊಡನೆ ಗೋಕುಲಕ್ಕೆ ಹೋಗಿ ಸರ್ವರನ್ನೂ ಮೋದಗೊಳಿಸಿದನು.

ಮತ್ತೊಂದು ದಿನ ಬ್ರಹ್ಮದೇವರ ವರದಿಂದ ಅವಧ್ಯನಾದ ವಿಷವೃಕ್ಷರೂಪಿಯಾದ ಉಗ್ರ ಎಂಬ ದೈತ್ಯನಿಂದಾಗಿ ಗೋಕುಲದ ಜನರು ರೋಗ ಪೀಡಿತರಾಗಲು, ಅದನ್ನು ಕಂಡು ಕೃಷ್ಣನು ಆ ವೃಕ್ಷರೂಪಿ ಉಗ್ರನನ್ನೂ ಅದರಂತೆಯೇ ಇರುವ ಸಕಲ ವೃಕ್ಷಗಳನ್ನೂ ಬುಡಸಹಿತ ಕಿತ್ತಿ ಭಸ್ಮಮಾಡಿ ಸ್ವಜನರನ್ನು ರೋಗರಹಿತರನ್ನಾಗಿ ಮಾಡಿ ಎಲ್ಲರನ್ನೂ ಆನಂದಗೊಳಿಸಿದನು. ಇಂತಹ ಮಹಾಮಹಿಮನಾದ ಶ್ರೀ ಕೃಷ್ಣನು ನನ್ನನ್ನು ರಕ್ಷಿಸಲಿ ಎಂದು ಭಾವ.

**ಅಲಂಕಾರಗಳು :-** ಇಲ್ಲಿ ಹಿಂದಿನಂತೆಯೇ ''ಕಾವ್ಯಲಿಂಗ'' ಮತ್ತು ''ಅಸಂಭವ'' ಎಂಬ ಅಲಂಕಾರಗಳಲ್ಲದೆ ''ಉದಾತ್ತಾಲಂಕಾರ''ವೂ ಇದೆ. ಇವೆಲ್ಲದರ ಸಮ್ಮಿಲನದಿಂದ ಸಂಕರವಾಗಿದೆ.

ಶ್ರೀಕೃಷ್ಣನ ಸಮೃದ್ಧಿಯಿಂದ ಕೂಡಿದ ಮಹತ್ತಾದ ಚರಿತ್ರೆಯು ಬಲರಾಮನಿಗೆ ಪುಷ್ಟಿದಾಯಕವಾಗಿ ವರ್ಣಿತ-ವಾಗಿರುವುದರಿಂದ ಇಲ್ಲಿ ಉದಾತ್ತಾಲಂಕಾರವು.

**ಲಕ್ಷಣ :-** ''ಉದಾತ್ತಂವೃದ್ಧಿರ್ಪೂರ್ೀದಾತ್ತಚರಿತಂ ವಾನ್ಯಬೋಧಕಂ'' ।

**ದೃಷ್ಟಾಂತ :-** ''ರಾಜನ್ಯರಾಜಕೋಟೀರಮಣಿನೀರಾಜಿತೋ ಮುನಿಃ ॥ '' -ಅಲಂಕಾರಮಂಜರೀ

ಇಲ್ಲಿ ವ್ಯಧಾತ್, ಅಪಿಬತ್, ಅವ್ಯಾತ್ - ಎಂಬ ಮೂರು ಕ್ರಿಯಾಪದಗಳಿವೆ. ವೀತ್ಯುಪಸರ್ಗಪೂರ್ವಕ ''ಡುಧಾಞ್ ಧಾರಣಪೋಷಣಯೋಃ'' ಎಂಬ ಧಾತುವಿನ ಸಕರ್ಮಕ ಕರ್ತರಿ ಲುಙ್ ಪರಸ್ಮೈಪದಿ ಪ್ರಥಮಪುರುಷ ಏಕವಚನದಲ್ಲಿ ''ವ್ಯಧಾತ್'' ಎಂದಾಗಿದೆ.

| | | | |
|---|---|---|---|
| **ರೂಪ :-** | ವ್ಯಧಾತ್ | ವ್ಯಧಾತಾಂ | ವ್ಯಧುಃ |
| | ವ್ಯಧಾಃ | ವ್ಯಧಾತಂ | ವ್ಯಧಾತ |
| | ವ್ಯಧಾಂ | ವ್ಯಧಾವ | ವ್ಯಧಾಮ ॥ |

''ಪಾಪಾನೇ'' ಎಂಬ ಧಾತುವಿನ ಪಿಬಾದೇಶದ ಸಕರ್ಮಕ ಕರ್ತರಿ ಲಙ್ ಪರಸ್ಮೈಪದಿ ಪ್ರಥಮಪುರುಷ ಏಕವಚನದಲ್ಲಿ ''ಅಪಿಬತ್'' ಎಂದಾಗಿದೆ.

| | | | |
|---|---|---|---|
| **ರೂಪ :-** | ಅಪಿಬತ್ | ಅಪಿಬತಾಂ | ಅಪಿಬನ್ |
| | ಅಪಿಬಃ | ಅಪಿಬತಂ | ಅಪಿಬತ |
| | ಅಪಿಬಂ | ಅಪಿಬಾವ | ಅಪಿಬಾಮ ॥ |

''ಅವ-ರಕ್ಷಣೇ'' ಎಂಬ ಧಾತುವಿನ ಸಕರ್ಮಕ ಕರ್ತರಿ ಆಶೀರ್ಲಿಙ್ ಪರಸ್ಮೈಪದಿ ಪ್ರಥಮಪುರುಷ ಏಕವಚನದಲ್ಲಿ ''ಅವ್ಯಾತ್'' ಎಂದಾಗಿದೆ.

| | | | |
|---|---|---|---|
| **ರೂಪ:-** | ಅವ್ಯಾತ್ | ಅವ್ಯಾಸ್ತಾಂ | ಅವ್ಯಾಸುಃ |
| | ಅವ್ಯಾಃ | ಅವ್ಯಾಸ್ತಂ | ಅವ್ಯಾಸ್ತ |
| | ಅವ್ಯಾಸಂ | ಅವ್ಯಾಸ್ವ | ಅವ್ಯಾಸ್ಮ |

**ದುರ್ಗಾರಣ್ಯಪ್ರವೇಶಾಚ್ಚ್ಯುತ ನಿಜಸರಣೀನ್ ಗೋಗಣಾನಾಹ್ವಯದ್ಯೋ**
**ದಾವಾಗ್ನಿಂ ತತ್ರ ಪೀತ್ವಾ ಸಮಪುಷದನುಗಾನ್ ಗೋಪಕಾನಾವಿಷಣ್ಣಾನ್ ।**
**ಗೋಭಿರ್ಗೋಪೈಃ ಪರೀತಸ್ಸರಿದುದಕತಟಸ್ಥೋಪಲೇ ಭೋಜ್ಯಮನ್ನಂ**
**ಭುಕ್ತ್ವಾ ವೇಣೋರ್ನಿನಾದಾದ್ವ್ರಜಗತವನಿತಾಚಿತ್ತಹಾರೀ ಸ ಮಾಽವ್ಯಾತ್ ॥ 5 ॥**

**ಅನ್ವಯಾರ್ಥ :-** ಯಃ = ಯಾವ ಕೃಷ್ಣನು, ದುರ್ಗಾರಣ್ಯಪ್ರವೇಶಾತ್ = ದುರ್ಗಮವಾದ ಅರಣ್ಯದಲ್ಲಿ ಪ್ರವೇಶ ಮಾಡಿದ್ದರಿಂದ, ಚ್ಯುತನಿಜಸರಣೀನ್ = ಮಾರ್ಗವನ್ನು ತಪ್ಪಿಸಿಕೊಂಡಿರುವ (ದಾರಿ ತಪ್ಪಿದ) ಗೋಗಣಾನ್ = ಗೋಸಮೂಹಗಳನ್ನು, ಆಹ್ವಯತ್ = ಕೂಗಿ ಕರೆದನೋ, ತತ್ರ = ಅರಣ್ಯದಲ್ಲಿ, ಅಥವಾ ಆ ಸಮಯದಲ್ಲಿ, ದಾವಾಗ್ನಿಂ = ಕಾಡು ಕಿಚ್ಚನ್ನು, ಪೀತ್ವಾ = ಪಾನಮಾಡಿ, ಅನುಗಾನ್ = ತನ್ನನ್ನು ಅನುಸರಿಸಿ ಬರತಕ್ಕ, ಆವಿಷಣ್ಣಾನ್ = ಬಹಳ ಭೀತಿಗೊಂಡಿರುವ, ತಾನ್ = ಆ ಗೋಪಾಲಕರನ್ನು, ಸಮಪುಷತ್ = ಚೆನ್ನಾಗಿ ರಕ್ಷಿಸಿದನೋ, ಗೋಭಿಃ = ಆಕಳುಗಳಿಂದ, ಗೋಪೈಃ = ಗೋಪಾಲಕರುಗಳಿಂದ, ಪರೀತಃ = ಸುತ್ತುವರಿಯಲ್ಪಟ್ಟವನಾಗಿ, ಸರಿದುದಕತಟಸ್ಥೋಪಲೇ – ಸರಿದುದಕ = ಯಮುನಾ ನದಿಯ ನೀರಿನ, ತಟಸ್ಥ = ದಂಡೆಯಲ್ಲಿರುವ, ಉಪಲೇ = ಬಂಡೆಯ ಮೇಲೆ, ಭೋಜ್ಯಂ = ಭೋಜನಾರ್ಹವಾದ, ಅನ್ನಂ = ಅನ್ನವನ್ನು, ಭುಕ್ತ್ವಾ = ಭುಂಜಿಸಿ, ವೇಣೋಃ = ಮುರಳಿಯ, ನಿನಾದಾತ್ = ಮಧುರ ನಾದದಿಂದ, ವ್ರಜಗತವನಿತಾಚಿತ್ತಹಾರೀ – ವಜ್ರಗತ = ಗೋಕುಲದಲ್ಲಿರುವ ವನಿತಾ = ಗೋಪಸ್ತ್ರೀಯರ, ಚಿತ್ತಹಾರೀ = ಮನಸ್ಸನ್ನಪಹರಿಸಿದ, ಸಃ = ಆ ಶ್ರೀ ಕೃಷ್ಣನು, ಮಾ = ನನ್ನನ್ನು, ಅವ್ಯಾತ್ = ಕಾಪಾಡಲಿ.

**ವಿಗ್ರಹವಾಕ್ಯ :-** ದುರ್ಗಂ ಚ ತತ್ ಅರಣ್ಯಂ ಚ ದುರ್ಗಾರಣ್ಯಂ, ದುರ್ಗಾರಣ್ಯೇ ಪ್ರವೇಶಃ, ದುರ್ಗಾರಣ್ಯಪ್ರವೇಶಃ, ತಸ್ಮಾತ್ । ನಿಜಾಚಸಾ ಸರಣಿಶ್ಚ ನಿಜಸರಣಿಃ, ಚ್ಯುತಾನಿಜಸರಣಿಃ, ಯೈಃತೇ ಚ್ಯುತನಿಜಸರಣಯಃ ತಾನ್. ಚ್ಯುತ–ನಿಜಸರಣೀನ್ । ಗವಾಂ ಗಣಾಃ ಗೋಗಣಾಃ, ತಾನ್ । ದಾವಶ್ಚಾಸೌ ಅಗ್ನಿಶ್ಚ ದಾವಾಗ್ನಿಃ, ತಮ್ । ಅನುಗಚ್ಛಂತೀತಿ ಅನುಗಾಃ, ತಾನ್ । ಗಾಃ ಪಾಂತೀತಿ ಗೋಪಾಃ, ತೈಃ । ಸರಿತಃ ಉದಕಂ ಸರಿದುದಕಂ, ಸರಿದುದುಕಸ್ಯ ತಟಂ ಸರಿದುದಕತಟಂ, ತಟೇ ತಿಷ್ಠತೀತಿ ತಟಸ್ಥಃ, ತಟಸ್ಥಶ್ಚಾಸೌ ಉಪಲಶ್ಚ ತಟಸ್ಥೋಪಲಃ, ತಸ್ಮಿನ್ ಸರಿದುದಕಟಸ್ಥೋಪಲೇ । ಭೋಕ್ತುಂಯೋಗ್ಯಂ ಭೋಜ್ಯಂ, ತತ್– ಭೋಜ್ಯಮ್ । ವ್ರಜಂಗತಾಃ ವ್ರಜಗತಾಃ, ವ್ರಜಗತಾಶ್ಚತಾಃ ವನಿತಾಶ್ಚ ವ್ರಜಗತವನಿತಾಃ, ವ್ರಜಗತ ವನಿತಾನಾಂ ಚಿತ್ತಂ ವ್ರಜಗತವನಿತಾಚಿತ್ತಂ ತತ್ ಹರತೀತಿ ವ್ರಜಗತವನಿತಾಚಿತ್ತಹಾರೀ ॥

**ತಾತ್ಪರ್ಯ :-** ಶ್ರೀಕೃಷ್ಣನು ಒಂದು ದಿನ ಬಲರಾಮ ಮತ್ತು ಗೋಪಾಲಕರಿಂದ ಸಹಿತನಾಗಿ ದುರ್ಗಾರಣ್ಯದಲ್ಲಿ ಗೋವುಗಳನ್ನು ಸಂಚಾರ ಮಾಡಿಸುತ್ತಾ ಗೋವುಗಳಿಗೆ ಹುಲ್ಲು ತಿನ್ನಿಸಲು ಗೋಪಾಲಕರಿಗೆ ಹೇಳಿ ಒಂದೆಡೆ ವಿಶ್ರಾಂತಿಗಾಗಿ ಕುಳಿತನು. ಗೋವುಗಳು ಹುಲ್ಲು ತಿನ್ನುತ್ತಾ ಮೆಲ್ಲಮೆಲ್ಲನೆ ಮುಂದುವರೆದು ಗೋಪಾಲಕರಿಗೆ ತಿಳಿಯದಂತೆ ಗಹನವಾದ ಮುಂಜಾಟವಿಯನ್ನು ಪ್ರವೇಶಿಸಿ ಅಲ್ಲಿ ಕಾಡುಕಿಚ್ಚಿನ ಮಧ್ಯೆ ಸಿಲುಕಿ ಬೆಂಕಿಯ ತಾಪದಿಂದ ಕಡನೊಂದು ಸರಿಯಾದ ದಾರಿಗಾಣದೆ ಕೂಗಲಾರಂಭಿಸಿದವು. ಬಹುದೂರದಿಂದ ಕೇಳಿ ಬರುತ್ತಿರುವ ಗೋವುಗಳ ಧ್ವನಿಯನ್ನಾಲಿಸಿದ ಕೃಷ್ಣನು ಮಾರ್ಗತಪ್ಪಿ ಆಕಳುಗಳು ವಿಪತ್ತಿನಲ್ಲಿ ಸಿಲುಕಿರುವವೆಂದು ನಿಶ್ಚಯಿಸಿ ಆಯಾ ಗೋವುಗಳನ್ನು ಹೆಸರುಹಿಡಿದು ಕರೆಯಲು, ಕೃಷ್ಣನ ಧ್ವನಿಯನ್ನು ಕೇಳಿದ ಗೋವುಗಳು ಮರುದನಿಯಿತ್ತವು. ಆಗ ಶ್ರೀ ಕೃಷ್ಣನು ಆ ಧ್ವನಿಯು ಬರುತ್ತಿರುವ ದಿಕ್ಕಿನಕಡೆ ಗೋಪಾಲಕರೊಡನೆ ಹೋಗಿ ಕಾಡುಕಿಚ್ಚಿನಲ್ಲಿ ಸಿಕ್ಕು ಕಷ್ಟಪಡುತ್ತಿರುವ ಗೋವುಗಳನ್ನು ನೋಡಿ ಕಾಡುಕಿಚ್ಚನ್ನು ಪಾನಮಾಡಿ ಸಕಲ ಗೋವುಗಳನ್ನೂ ರಕ್ಷಿಸಿ ಗೋಕುಲಕ್ಕೆ ಸಕಲರೊಡನೆ ಬಂದು ಸೇರಿದನು.

ಕೆಲದಿನಗಳು ಕಳೆದ ಮೇಲೆ ಮತ್ತೊಂದು ದಿವಸ ಶ್ರೀ ಕೃಷ್ಣನು ಗೊಲ್ಲಬಾಲಕರೊಡನೆ ಕೂಡಿ ಸಂಚರಿಸುತ್ತಾ ಯಮುನಾ ನದಿಯ ದಂಡೆಯ ಮೇಲಿರುವ ಶಿಲಾ ತಲದಲ್ಲಿ (ಹಾಸುಗಲ್ಲಿನ ಮೇಲೆ) ಕುಳಿತು ಮನೆಯಿಂದ ತಂದಿರುವ ದಧ್ಯೋದನ (ಮೊಸರನ್ನ)ವನ್ನು ಬಲರಾಮಾದಿಗಳಿಂದ ಯುಕ್ತನಾಗಿ ಆನಂದದಿಂದ ಭೋಜನ ಮಾಡಿದನು. ಅನಂತರ ಮನೋಹರವಾದ ಕುಸುಮಿತವಾದ ಸುಂದರ ವನವನ್ನು ಪ್ರವೇಶಿಸಿ. ಪ್ರೇಮೋತ್ತೇಜಕವಾದ ವೇಣುವಾದನವನ್ನು ಮಾಡಲಾರಂಭಿಸಿದನು. ಶ್ರೀ ಕೃಷ್ಣನ ಆ ಸುರುಚಿರ ಮಂಜುಳ ಮುರಳೀನಾದವನ್ನಾಲಿಸಿ ಮಂತ್ರಮುಗ್ಧವಾದ ಸರ್ಪದಂತೆ ಮೈಮರೆತು, ಮನಸೋತು ಗೋಕುಲದ ಸುರಸುಂದರಿಯರಾದ ಗೊಲ್ಲಭಾಮೆಯರು ಓಡೋಡಿ ಬಂದು ಮುರಳೀ-ಮೋಹನನನ್ನು ತಮ್ಮ ಹಾವಭಾವ ವಿಲಾಸಗಳಿಂದ ಸ್ತುತಿಸಿ ತಮ್ಮನ್ನು ಆನಂದಗೊಳಿಸೆಂದು ಪ್ರಾರ್ಥಿಸಿದರು. ಆಗ ಶ್ರೀ ಕೃಷ್ಣನು ತನ್ನ ದೈವಿಕ, ಜಗನ್ಮೋಹಕ ಮುರಳೀನಾದದಿಂದ ಸರ್ವರನ್ನೂ ಪರಮಾನಂದಗೊಳಿಸಿದನು. ಇಂಥ ಮಹಾಮಹಿಮನಾದ ಸಿರಿಕೃಷ್ಣನು ನಮ್ಮನ್ನು ರಕ್ಷಿಸಲಿ ಎಂದು ಭಾವ.

**ಅಲಂಕಾರಗಳು :-** ಈ ಪದ್ಯದಲ್ಲಿಯೂ ಹಿಂದಿನಂತೆ ''ಕಾವ್ಯಲಿಂಗ, ಅಸಂಭವ, ಉದಾತ್ತಾಲಂಕಾರ''ಗಳಿವೆ. ಇವಲ್ಲದೇ ''ಪ್ರಹರ್ಷಣಾಲಂಕಾರ'' ವೂ ಇದೆ.

ಇಲ್ಲಿ ಗೋಪವನಿತೆಯರು ತಮ್ಮ ಪ್ರಯತ್ನವಿಲ್ಲದೆ ವೇಣುನಾದದಿಂದ ಉತ್ಕಂಠಿ ತಾರ್ಥವನ್ನು ಹೊಂದಿದರು. ಮತ್ತು ದಿಕ್ಕೆಟ್ಟು ಹಸುಗಳು ಕಾಳ್ಗಿಚ್ಚಿನಲ್ಲಿ ಸಿಲುಕಿ ತೊಳಲುತ್ತಿರುವಾಗ ಅವುಗಳ ಪ್ರಯತ್ನವಿಲ್ಲದೆ ಕೃಷ್ಣನ ಧ್ವನಿಶ್ರವಣಮಾತ್ರದಿಂದ ಅಪಾಯದಿಂದ ಪಾರಾದವು, ಗೋಪಾಲಕರು ತಮ್ಮ ಪ್ರಯತ್ನವಿಲ್ಲದೆ ಕೃಷ್ಣನ ಸನ್ನಿಧಾನದಿಂದ ಮೃಷ್ಟಾನ್ನ ಭೋಜನ ಮಾಡಿದರು, ಎಂಬ ಉತ್ಕಂಠಿತಾರ್ಥಗಳನ್ನು ವರ್ಣನ ಮಾಡಿರುವುದರಿಂದ ''ಪ್ರಹರ್ಷಣಾಲಂಕಾರ''ವಿದೆ.

**ಲಕ್ಷಣ :-** ''ಉತ್ಕಂಠಿತಾರ್ಥಸಂಸಿದ್ಧಿಃ ವಿನಾಯತ್ನಂ ಪ್ರಹರ್ಷಣಮ್ ।''

**ಉದಾ :-** ''ತಾಮೇವಧ್ಯಾಯತೇ ತಸ್ಮೈ ನಿಸೃಷ್ಟಾ ಸೈವದೂತಿಕಾ ॥ ''

ಮೇಲಿನ ನಾಲ್ಕು ಅಲಂಕಾರಗಳ ಸಮ್ಮಿಲನವಿರುವುದರಿಂದ 'ಮೌಕ್ತಿಕ ಪದ್ಮರಾಗ' ನ್ಯಾಯದಂತೆ ಸಂಸೃಷ್ಟಿಯಾಗಿದೆ.

ಇಲ್ಲಿ ''ಆಹ್ವಯತ್, ಸಮಪುಷತ್ ಅವ್ಯಾತ್''' ಎಂಬ ಮೂರು ಕ್ರಿಯಾಪದಗಳಿವೆ. ಆಙ್ ''ಉಪಸರ್ಗಪೂರ್ವಕ'' ಹ್ವೇಞ್ ಸ್ಪರ್ಧಾಯಾಂ ಶಬ್ದೇಚ'' ಎಂಬ ಧಾತುವಿನ ಸಕರ್ಮಕ ಕರ್ತರಿ ಲಙ್ ಪರಸ್ಮೈಪದಿ ಪ್ರಥಮಪುರುಷ ಏಕವಚನದಲ್ಲಿ ''ಆಹ್ವಯತ್'' ಎಂದಾಗಿದೆ.

| | | | |
|---|---|---|---|
| **ರೂಪ :-** | ಆಹ್ವಯತ್ | ಆಹ್ವಯತಾಂ | ಆಹ್ವಯನ್ |
| | ಆಹ್ವಯಃ | ಆಹ್ವಯತಂ | ಆಹ್ವಯತ |
| | ಆಹ್ವಯಂ | ಆಹ್ವಯಾವ | ಆಹ್ವಯಾಮ ॥ |

''ಸಮ್'' ಇತ್ಯುಪಸರ್ಗಪೂರ್ವಕ'' ಪುಷ ಪುಷ್ಟೌ ಎಂಬ ಧಾತುವಿನ ಸಕರ್ಮಕ ಕರ್ತರಿ ಲುಙ್ ಪರಸ್ಮೈಪದಿ ಪ್ರಥಮಪುರುಷ ಏಕವಚನದಲ್ಲಿ ''ಸಮಪುಷತ್'' ಎಂದಾಗಿದೆ.

| | | | |
|---|---|---|---|
| **ರೂಪ :-** | ಅಪುಷತ್ | ಅಪುಷತಾಂ | ಅಪುಷನ್ |
| | ಅಪುಷಃ | ಅಪುಷತಂ | ಅಪುಷತ |
| | ಅಪುಷಂ | ಅಪುಷಾವ | ಅಪುಷಾಮ ॥ |

''ಅವ್ಯಾತ್''ಎಂಬ ಕ್ರಿಯಾಪದದ ರೂಪವನ್ನು ಹಿಂದೆಯೇ ಕೊಡಲಾಗಿದೆ. ॥ 5 ॥

**ಕೃಷ್ಣೋಽಸ್ಮಾಕಂ ಪತಿಸ್ಸ್ಯಾದಿತಿ ಕೃತತಪಸಾಂ ಮಜ್ಜನೇ ಗೋಪಿಕಾನಾಂ**
**ನಗ್ನಾನಾಂ ವಸ್ತ್ರದಾತಾ ದ್ವಿಜವರವನಿತಾಽಽನೀತಮನ್ನಂ ಸಮಶ್ನನ್ ।**
**ಶ್ರಾಂತೈರ್ಗೋಪೈಸ್ಸಮಂ ಯೋ ಬಲಮಥನಬಲಾವಾಹೃತೇಽಸ್ಮಿನ್ಸವೃಷ್ಟೌ**
**ಪ್ರೋದ್ಧೃತ್ಯಾಽಽಹಾರ್ಯವರ್ಯಂ ನಿಜಜನಮಖಿಲಂ**
**ಪಾಲಯನ್ ಪಾತ್ವಸೌ ಮಾಮ್ ॥ 6 ॥**

**ಅನ್ವಯಾರ್ಥ :-** ಯಃ = ಯಾವ ಕೃಷ್ಣನು, ಅಸ್ಮಾಕಂ = ನಮ್ಮಗಳಿಗೆ, ಕೃಷ್ಣಃ = ಕೃಷ್ಣನು, ಪತಿಸ್ಸ್ಯಾತ್ = ಗಂಡನಾಗಲಿ. ಇತಿ = ಹೀಗೆಂದು ಸಂಕಲ್ಪಿಸಿಕೊಂಡು, ಕೃತ ತಪಸಾಂ – ಕೃತ = ಮಾಡಲ್ಪಟ್ಟ ತಪಸಾಂ = ತಪಸ್ಸುಳ್ಳ, ಮಜ್ಜನೇ = ಸ್ನಾನಕಾಲದಲ್ಲಿ ನಗ್ನಾನಾಂ = ವಸ್ತ್ರರಹಿತರಾದ, ಗೋಪಿಕಾನಾಂ = ವ್ರಜಸ್ತ್ರೀಯರುಗಳಿಗೆ, ವಸ್ತ್ರದಾತಾ = ಸೀರೆಗಳನ್ನು ಕೊಡುವವನಾಗಿ, ದ್ವಿಜವರವನಿತಾಽಽನೀತಂ – ದ್ವಿಜವರ = ಬ್ರಾಹ್ಮಣ ಶ್ರೇಷ್ಠರ, ವನಿತಾ = ಪತ್ನಿಯರಿಂದ, ಆನೀತಂ = ತರಲ್ಪಟ್ಟ, ಅನ್ನಂ = ಅನ್ನವನ್ನು, ಶ್ರಾಂತೈಃ = ಹಸಿವಿನಿಂದ ಪೀಡಿತರಾದ, ಗೋಪೈಃ = ಗೋಪಾಲಕರುಗಳಿಂದ, ಸಮಂ = ಕೂಡಿಕೊಂಡು, ಸಮಶ್ನನ್ = ಚೆನ್ನಾಗಿ ಭೋಜನಮಾಡಿ, ಬಲಮಥನಬಲೌ = ಬಲ ಮಥನ = ದೇವೇಂದ್ರನ, ಬಲೌ = ಬಲಿಯು (ಪೂಜಾ ದ್ರವ್ಯವು) ಅಹೃತೇ = ತನ್ನಿಂದ ಅಪಹರಿಸಲ್ಪಡುತ್ತಿರಲು, ಅಸ್ಮಿನ್ = ಇಂದ್ರದೇವನು, ಸವೃಷ್ಟೌ = ಮಳೆಗರೆಯುತ್ತಿರಲು, ಆಹಾರ್ಯವರ್ಯಂ = ಪರ್ವತಶ್ರೇಷ್ಠವನ್ನು, ಪ್ರೋದ್ಧೃತ್ಯ = ಮೇಲಕ್ಕೆ ಎತ್ತಿ, ಅಖಿಲಂ = ಸಮಸ್ತರಾದ, ನಿಜಜನಂ = ಸ್ವಜನರನ್ನು, ಪಾಲಯನ್ = ರಕ್ಷಣೆಮಾಡಿದ, ಅಸೌ = ಅಂಥಾ ಶ್ರೀ ಕೃಷ್ಣನು, ಮಾಂ = ನನ್ನನ್ನು, ಪಾತು = ಸಂರಕ್ಷಿಸಲಿ.

**ವಿಗ್ರಹವಾಕ್ಯ :-** ಕರ್ಷತೀತಿ ಕೃಷ್ಣಃ। ಕೃತಂತಪಃ ಯಾಭಿಸ್ತಾಃ ಕೃತತಪಸಃ ತಾಸಾಂ ಕೃತ ತಪಸಾಮ್ । ವಸ್ತ್ರಾಣಾಂ ದಾತಾ ವಸ್ತ್ರದಾತಾ । ದ್ವಾಭ್ಯಾಂ ಜಾಯಂತೆ ಇತಿ ದ್ವಿಜಾಃ, ದ್ವಿಜಾನಾಂ ವರಾಃ ದ್ವಿಜವರಾಃ ದ್ವಿಜವರಾಣಾಂ ವನಿತಾಃ ದ್ವಿಜವರವನಿತಾಃ ತಾಭಿಃ ಅನೀತಂ ದ್ವಿಜವರವನಿತಾಽಽನೀತಮ್ । ಬಲಂ ಮಥ್ನಾತೀತಿ ಬಲಮಥನಃ ಬಲಮಥನಸ್ಯ ಬಲಿಃ ಬಲಮಥನ ಬಲಿಃ ತಸ್ಮಿನ್ ಬಲಮಥನಬಲೌ । ವೃಷ್ಟ್ಯಾಸಹಿತಃ ಸವೃಷ್ಟಿಃ ತಸ್ಮಿನ್ ಸವೃಷ್ಟೌ। ಆಹಾರ್ಯಾಣಾಂ ವರ್ಯಃ ಆಹಾರ್ಯವರ್ಯಃ ತಂ ಆಹಾರ್ಯ ವರ್ಯಮ್ । ನಿಜಶ್ಚಾಸೌ ಜನಶ್ಚ ನಿಜಜನಃ ತಂ ನಿಜಜನು ॥

**ತಾತ್ಪರ್ಯ :-** ಶ್ರೀಕೃಷ್ಣನು ತಮಗೆ ಪತಿಯಾಗಬೇಕೆಂದು ಕಾತ್ಯಾಯನೀ ಪೂಜಾದಿಗಳಿಂದ ತಪಸ್ಸನ್ನು ಮಾಡಿದ ಗೋಪಬಾಲಿಕೆಯರು ಒಂದು ದಿನ ಯಮುನಾ ನದಿಗೆ ಬಂದು ನದಿಯ ತೀರದಲ್ಲಿ ತಮ್ಮ ತಮ್ಮ ಸೀರೆ, ಕುಬುಸಗಳನ್ನು ಬಿಚ್ಚಿಟ್ಟು ನಗ್ನರಾಗಿ ಯಮುನಾ ನದಿಯಲ್ಲಿ ಸ್ನಾನ ಮಾಡುತ್ತಿದ್ದರು. ಆಗ ಶ್ರೀಕೃಷ್ಣನು ಗೋಪಕುಮಾರಿಯರ ಮನೋಭೀಷ್ಟ ಫಲವನ್ನು ನೀಡಲು ಗೆಳೆಯರೊಡನೆ ಯಮುನಾತೀರಕ್ಕೆ ಬಂದು ಅಲ್ಲಿ ಗೋಪಿಕಾ ಸ್ತ್ರೀಯರು ಬಿಚ್ಚಿ ಇಟ್ಟಿದ್ದ ಅವರ ವಸ್ತ್ರಗಳನ್ನು ತೆಗೆದುಕೊಂಡು ಕದಂಬ ವೃಕ್ಷದ ಮೇಲೇರಿ ಕುಳಿತನು. ಸ್ನಾನಾನಂತರ ಗೋಪಬಾಲೆಯರು ತಮ್ಮ ವಸ್ತ್ರಗಳನ್ನು ಕೃಷ್ಣನು ತೆಗೆದುಕೊಂಡು ಹೋಗಿ ವೃಕ್ಷದ ಮೇಲೆ ಕುಳಿತಿರುವುದನ್ನು ಗಮನಿಸಿ ಬಹುವಿಧವಾಗಿ ಕೃಷ್ಣನನ್ನು ಸ್ತುತಿಸಿ ತಮ್ಮ ವಸ್ತ್ರಗಳನ್ನು ಕೊಡೆಂದು ಪ್ರಾರ್ಥಿಸಲು ಶ್ರೀ ಕೃಷ್ಣನು ಅನೇಕ ಹಾಸ್ಯವಚನಗಳನ್ನಾಡಿ ಅವರವರ ವಸ್ತ್ರಗಳನ್ನು ಅವರವರಿಗೆ ಕರುಣಿಸಿ ಅವರನ್ನು ಕಳುಹಿಸಿಕೊಟ್ಟನು.

ಮತ್ತೊಂದು ದಿನ ಕೃಷ್ಣನು ಗೆಳೆಯರಾದ ಗೋಪಬಾಲಕರೊಡನೆ ಬಹುದೂರ ಗೋವುಗಳನ್ನು ಹೊಡೆದುಕೊಂಡು ಹೋದಾಗ ಗೋಪಬಾಲಕರು ಹಸಿವಿನಿಂದ ಪೀಡಿತರಾಗಿ ''ಕೃಷ್ಣ, ನಮಗೆ ಭೋಜನಮಾಡಿಸು'' ಎಂದು ಪ್ರಾರ್ಥಿಸಲು ಕೃಷ್ಣನು, ''ಸಮೀಪದಲ್ಲಿಯೇ ಬ್ರಾಹ್ಮಣರು ಸತ್ರಯಾಗವನ್ನು ಮಾಡುತ್ತಿದ್ದಾರೆ. ನೀವು ಅಲ್ಲಿಗೆ ಹೋಗಿ ಆ ಬ್ರಾಹ್ಮಣ ಪತ್ನಿಯರನ್ನು ಕಂಡು ಬಲರಾಮನೊಡನೆ ನಾನು ಇಲ್ಲಿಗೆ ಬಂದಿರುವ ವಿಚಾರವನ್ನು ತಿಳಿಸಿರಿ. ಅವರು ನಿಮಗೆ ಬೇಕಾದಷ್ಟು ಅನ್ನಾದಿಗಳನ್ನು ನೀಡುತ್ತಾರೆ'' ಎಂದು ಹೇಳಿದನು. ಗೋಪಾಬಾಲಕರು ಅದರಂತೆಯೇ ಅಲ್ಲಿಗೆ ಹೋಗಿ ವಿಷಯವನ್ನು ಬ್ರಾಹ್ಮಣ ಪತ್ನಿಯರಿಗೆ ತಿಳಿಸಿದರು. ಅವರು ಅತ್ಯಂತ ಆನಂದಗೊಂಡು ಚತುರ್ವಿಧಷಡ್ರಸೋಪೇತವಾದ ಭೋಜನವನ್ನು ತಾವೇ ತೆಗೆದುಕೊಂಡು ಬಂದು ನೀಡಿದರು. ಶ್ರೀಕೃಷ್ಣನು ಬಲರಾಮ ಮತ್ತು ಗೋಪಾಲಕರೊಡನೆ ಭೋಜನಮಾಡಿ ಅವರಲ್ಲಿ ಅನುಗ್ರಹಮಾಡಿ ಕಳುಹಿಸಿಕೊಟ್ಟನು.

ಮತ್ತೊಮ್ಮೆ ತನ್ನನ್ನು ಲೋಕಸಾಧಾರಣನಾದ ಮಾನವನೆಂದು ತಿಳಿದ ಇಂದ್ರ ದೇವರ ದರ್ಪವನ್ನು ಮುರಿದು ಸ್ವವಿಷಯಕತತ್ವಜ್ಞಾನವನ್ನು ಅವನಿಗೆ ಉಂಟು ಮಾಡಲು ಇಂದ್ರನನ್ನು ಉದ್ದೇಶಿಸಿ ವ್ರಜಜನರು ಪ್ರತಿವರ್ಷ ಮಾಡುತ್ತಿದ್ದ ಉತ್ಸವವನ್ನು ನಿಲ್ಲಿಸಿ ಅದೇ ಉತ್ಸವವನ್ನು ಪರ್ವತೋದ್ದೇಶವಾಗಿ ನಂದಾದಿಗಳಿಂದ ಮಾಡಿಸಿ, ಶ್ರೀ ಕೃಷ್ಣನು ತಾನೇ ಪರ್ವತಾಕಾರರೂಪಾಂತರವನ್ನು ಹೊಂದಿ ಉತ್ಸವ ಬಲಿಯನ್ನೆಲ್ಲಾ ಭುಂಜಿಸಿದನು. ಶ್ರೀ ಕೃಷ್ಣನ ಮಾಹಾತ್ಮ್ಯವನ್ನು ತಿಳಿಯದೇ ಇಂದ್ರನು ತನಗಾಗಿ ಮಾಡುತ್ತಿದ್ದ ಉತ್ಸವವನ್ನು ಗೋಪರು ನಿಲ್ಲಿಸಿದರೆಂಬ ಕೋಪದಿಂದ ಬೃಂದಾವನದ ಜನರನ್ನು ಪೀಡಿಸಲು ಮೇಘಗಳಿಗೆ ಆಜ್ಞಾಪಿಸಿದನು. ಮೇಘಗಳು ಘೋರ ಮಳೆಯನ್ನು ಸುರಿಸಿದವು. ಅಸಾಧ್ಯವಾದ ಆ ಮಳೆಯ ಹೊಡೆತವನ್ನು ಸಹಿಸಲು ಅಶಕ್ತರಾಗಿ ಗೋಪಜನರು ಕಷ್ಟಪಡುತ್ತಿರುವುದನ್ನು ಕಂಡು ಶ್ರೀಕೃಷ್ಣನು ಅವರ ಪ್ರಾರ್ಥನೆಯಂತೆ ಅವರಿಗೆ ಸುಖವನ್ನುಂಟುಮಾಡಲು ತನ್ನ ಒಂದೇ ಹಸ್ತದಿಂದ (ಕಿರುಬೆರಳಿನಿಂದ) ಗೋವರ್ಧನ ಪರ್ವತವನ್ನು ಛತ್ರಿಯಂತೆ ಮೇಲೆತ್ತಿ ಹಿಡಿದು ಆ ಪರ್ವತದ ಕೆಳಗೆ ಸರ್ವರೂ ಆಶ್ರಯ ಪಡೆಯುವಂತೆ ಮಾಡಿ ಸರ್ವರನ್ನೂ ರಕ್ಷಿಸಿ ಎಲ್ಲರನ್ನೂ ಆನಂದ-ಗೊಳಿಸಿದನು. ಅಂಥ ಶ್ರೀ ಕೃಷ್ಣನು ನನ್ನನ್ನು ಸಂರಕ್ಷಿಸಲಿ ಎಂದು ಭಾವ.

**ವ್ಯಾಕರಣ ವಿಶೇಷ**

ಇಲ್ಲಿ ''ನಗ್ನಾನಾಂ ಗೋಪಿಕಾನಾಂ ವಸ್ತ್ರದಾತಾ'' ಎಂಬಲ್ಲಿ ''ಸಂಪ್ರದಾನೇ ಚತುರ್ಥೀ'' ಎಂಬ ಸೂತ್ರದಿಂದ ''ನಗ್ನಾಭ್ಯಃ ಗೋಪಿಕಾಭ್ಯಃ'' ಎಂದು ಚತುರ್ಥೀ ಬರಬೇಕಾಗಿತ್ತು. ಆದರೆ ಇಲ್ಲಿ ಗೋಪಸ್ತ್ರೀಯರು ಸೇವಕಿಯರಾದುದರಿಂದ ಸಂಪ್ರದಾನ ಸಂಜ್ಞೆ ಬರುವುದಿಲ್ಲವಾದುದರಿಂದ ಚತುರ್ಥೀ ವಿಭಕ್ತಿ ಬಾರದೇ ಷಷ್ಠೀ ವಿಭಕ್ತಿ ಬಂದಿದೆ.

''ವಸ್ತ್ರದಾತಾ'' ಎಂಬಲ್ಲಿ ''ವಸ್ತ್ರಾಣಾಂ ದಾತಾ'' ಎಂಬುದಾಗಿ ಷಷ್ಠೀ ಸಮಾಸ ಮಾಡಬೇಕು. ಆದರೆ ಇಲ್ಲಿ ವ್ಯಾಖ್ಯಾನಕಾರರು ಷಷ್ಠೀ ಸಮಾಸಕ್ಕೂ, ದ್ವಿತೀಯಾ ಸಮಾಸಕ್ಕೂ ಅವಕಾಶವಿರುವ ವಿಷಯವನ್ನು ನಿರೂಪಿಸುತ್ತಾರೆ. ಹೇಗೆಂದರೆ ದಾತೃಶಬ್ದ ತೃಜಂತವಾಗಿದ್ದರೂ ''ಕರ್ತರಿ ಚ'' ಎಂಬ ಸೂತ್ರದಿಂದ ಷಷ್ಠೀ ಸಮಾಸವನ್ನು ನಿಷೇಧಿಸಲಾಗಿದೆ. ಮತ್ತು ಇದನ್ನು ತೃನ್ನಂತಶಬ್ದ ಎಂದು ಇಟ್ಟುಕೊಂಡರೂ ''ನಲೋಕಾವ್ಯಯ ನಿಷ್ಠಾ'' ಎಂಬ ಸೂತ್ರದಿಂದಲೂ ಷಷ್ಠೀ ಸಮಾಸವನ್ನು ನಿಷೇಧಿಸಲಾಗಿದೆ. ಹಾಗಾದರೆ– ''ವಸ್ತ್ರದಾತಾ'' ಎಂದು ಷಷ್ಠೀ ಸಮಾಸ ಮಾಡಿದ್ದು ಹೇಗೆ ಯುಕ್ತವಾಗುತ್ತದೆ ಎಂದರೆ ಇದು ತೃಜಂತ ಶಬ್ದವಾಗಿದ್ದರೂ ''ಜನಿಕರ್ತುಃ'' ಎಂಬ ಸೂತ್ರದಲ್ಲಿ, ''ಮಂಜರೀ'' ಮುಂತಾದ ಗ್ರಂಥದಲ್ಲಿ ''ಕರ್ತರಿ ಚ'' ಎಂಬ ಸೂತ್ರದಲ್ಲಿ ಸೂಚಿಸಿದ ಷಷ್ಠೀ ನಿಷೇಧವನ್ನು ಅನಿತ್ಯವೆಂದು ಹೇಳಲಾಗಿದೆ. ಅಥವಾ ''ಇದಮಸ್ಥಮುಃ'' ಎಂಬ ಸೂತ್ರದಲ್ಲಿ, ''ಉಕಾರೇಣ ಇಕೋಽಚಿ ವಿಭಕ್ತೌ'' ಎಂಬುವಲ್ಲಿ ''ಅಚ್'' ಗ್ರಹಣ ಮಾಡಿರುವುದರಿಂದಲೇ ನಿಷೇಧದಿಂದ

ನಿರ್ದೇಶಿಸಿದ್ದನ್ನು ಅನಿತ್ಯವೆಂದು ಹೇಳಲಾಗಿದೆ. ಅಥವಾ ''ಯಾಜಕಾದಿಭ್ಯಶ್ಚ'' ಎಂಬುದರಿಂದ ಈ ಶಬ್ದವು ಯಾಜಕಾದಿ ಗಣದಲ್ಲಿ ಪಠಿತವಾಗಿರುವುದರಿಂದ ಷಷ್ಠೀ ಸಮಾಸವನ್ನು ಮಾಡಬಹುದು ಎಂದು ಹೇಳಲಾಗಿದೆ. ಹೀಗಿರುವುದರಿಂದ ''ಕರ್ತರಿ ಚ'' ಎಂಬ ಸೂತ್ರದಲ್ಲಿ ಸೂಚಿಸಿದ ಷಷ್ಠೀ ನಿಷೇಧವು ಇದಕ್ಕೆ ಅನ್ವಯಿಸುವುದಿಲ್ಲ. ಇದು ತೃನ್ನಂತ'' ಶಬ್ದವೆಂದು ಇಟ್ಟುಕೊಂಡರೂ ''ಗಮಿಗಮ್ಯಾದೀನಾಮುಪಸಂಖ್ಯಾನಂ'' ಎಂಬ ವಾರ್ತಿಕದ ಹೇಳಿಕೆಯ ಪ್ರಕಾರ ''ವಸ್ತ್ರಾಣಿದಾತಾ'' ಎಂದು ದ್ವಿತೀಯಾ ಸಮಾಸ ಮಾಡುವುದು ಯುಕ್ತವಾಗುವುದು. ಹೀಗೆ ಶ್ರೀ ಲಕ್ಷ್ಮೀನಾರಾಯಣಾಚಾರ್ಯರು ತಮ್ಮ ವ್ಯಾಖ್ಯಾನದಲ್ಲಿ ವ್ಯಾಕರಣ ವಿಶೇಷಣಗಳನ್ನು ಬಹುವಾಗಿ ವಿಮರ್ಶಿಸಿ ದ್ವಿತೀಯಾ ಮತ್ತು ಷಷ್ಠೀ ಉಭಯವಿಧ ಸಮಾಸಗಳನ್ನು ಮಾಡುವ ಮಾರ್ಗ ತೋರಿಸಿದ್ದಾರೆ. ಇದನ್ನು ಅವಲೋಕಿಸಿದರೆ ಅವರು ವ್ಯಾಕರಣಶಾಸ್ತ್ರಕೋವಿದರಾದ ಶ್ರೀ ಪರಿಮಳಾಚಾರ್ಯರ ಸತ್ಪುತ್ರರೆಂಬುದು ನೆನೆಪಿಗೆ ಬಂದು ಪರಮಾನಂದವಾಗುತ್ತದೆ. ಮತ್ತು ಆ ಮಹನೀಯರಲ್ಲಿ ಅಪಾರ ಗೌರವಾದರಗಳುಂಟಾಗುತ್ತವೆ.

**ಅಲಂಕಾರಗಳು :-** ಈ ಪದ್ಯದಲ್ಲಿ ಪೂರ್ವದಂತೆ ''ಕಾವ್ಯಲಿಂಗ-ಅಸಂಭವ-ಉದಾತ್ತ-ಪ್ರಹರ್ಷಣ ಅಲಂಕಾರ''-ಗಳಲ್ಲದೆ ''ವಿಶೋಷೋಕ್ತಿ-ಅಸಂಗತಿ'' ಎಂಬ ಅಲಂಕಾರಗಳೂ ಸಹ ಇವೆ. ಗೋಪಸ್ತ್ರೀಯರು ತಮಗೆ ಶ್ರೀಕೃಷ್ಣನು ಪತಿಯಾಗಬೇಕೆಂದು ತಪಸ್ಸು ಮಾಡಿದರು. ಇದು ಶ್ರೀ ಕೃಷ್ಣನು ಪತಿಯಾಗುವಿಕೆಗೆ ಸಮಗ್ರವಾದ ಕಾರಣ. ಆದರೂ ಇಲ್ಲಿ ಶ್ರೀಕೃಷ್ಣನು ಪತಿಯಾಗದೆ ಅವರಿಗೆ ವಸ್ತ್ರಗಳನ್ನು ಮಾತ್ರ ಕೊಟ್ಟನು ಎಂದು ಸಮಗ್ರ ಕಾರಣವಿದ್ದರೂ ಕಾರ್ಯವು ಹುಟ್ಟದಿರು-ವುದನ್ನು ವರ್ಣಿಸಿರುವುದರಿಂದ ''ವಿಶೇಷೋಕ್ತ್ಯಲಂಕಾರ'' ವೂ ಮತ್ತು ಗೋಕುಲದ ಜನರು ಇಂದ್ರನಿಗೆ ಪೂಜೆಯನ್ನು ಸಮರ್ಪಿಸದಿದ್ದುದರಿಂದ ಕುಪಿತನಾದ ಇಂದ್ರನು ಅವರನ್ನು ನಾಶಪಡಿಸಲು ಕುಂಭದ್ರೋಣ ಮಳೆಯನ್ನು ಸುರಿಸಿದನು. ಶ್ರೀಕೃಷ್ಣನು ಗೋವರ್ಧನಗಿರಿಯನ್ನು ಎತ್ತಿಹಿಡಿದು ಗೋಕುಲದ ಜನರನ್ನು ರಕ್ಷಿಸಿದನು. ಇದರಿಂದ ಯಾವುದೋ ಒಂದು ಕಾರ್ಯವನ್ನು ಮಾಡಲು ಪ್ರವೃತ್ತಿಸಿದವನಿಗೆ ಅದಕ್ಕೆ ವಿರುದ್ಧ ಕಾರ್ಯವು ನಡೆದರೆ ಅಸಂಗತ್ಯಲಂಕಾರವಾಗುತ್ತದೆ.

**ವಿಶೇಷೋಕ್ತ್ಯಲಂಕಾರ ಲಕ್ಷಣ :-** ''ಕಾರ್ಯಜನಿರ್ವಿಶೇಷೋಕ್ತಿಃ ಸತಿ ಪುಷ್ಕಲಕಾರಣೇ ॥ ''

**ಉದಾ:-** ''ಹೃದಿಸ್ನೇಹಕ್ಷಯೋನಾಭೂತ್ ಸ್ಮರದೀಪೇಜ್ವಲತ್ಯಪಿ ॥ ''

**ಅಸಂಗತ್ಯಲಂಕಾರಲಕ್ಷಣ :-** ''ಅನ್ಯತ್ಕರ್ತುಂ ಪ್ರವೃತ್ತಸ್ಯ ತದ್ವಿರುದ್ಧಕೃತಿಶ್ಚ ಸಾ ॥ ''..

**ಉದಾ:-** ''ಗೋತ್ರೋದ್ಧಾರ ಪ್ರವೃತ್ತೋಽಪಿ ಗೋತ್ರೋದ್ಭೇದಂ ಪುರಾಕರೋಃ ॥ ''

ಇಲ್ಲಿ ಇವೆಲ್ಲ ಅಲಂಕಾರಗಳ ಸಮ್ಮಿಲನದಿಂದ ಸಂಸೃಷ್ಟಿಯಾಗಿದೆ.

ಇಲ್ಲಿ 'ಸ್ಯಾತ್', 'ಪಾತು' ಎಂಬೆರಡು ಕ್ರಿಯಾಪದಗಳಿವೆ. ಮೊದಲನೆಯದು 'ಅಸಭುವಿ' ಎಂಬ ಧಾತುವಿನ ಅಕರ್ಮಕ ಕರ್ತರಿ ಆಶೀರ್ಲಿಙ್ ಪರಸ್ಮೈಪದಿ ಪ್ರಥಮಪುರುಷ ಏಕವಚನದ ರೂಪವಾಗಿಯೂ, ಎರಡನೆಯದು ''ಪಾ-ರಕ್ಷಣೆ'' ಎಂಬ ಧಾತುವಿನ ಸಕರ್ಮಕ ಕರ್ತರಿಲೋಟ್ ಪರಸ್ಮೈಪದಿ ಪ್ರಥಮಪುರುಷ ಏಕವಚನದ ರೂಪ-ವಾಗಿಯೂ ಇದೆ.

| | | | |
|---|---|---|---|
| ಮೊದಲನೆಯದರ ರೂಪ :- | ಸ್ಯಾತ್ | ಸ್ಯಾತಾಂ | ಸ್ಯುಃ |
| | ಸ್ಯಾಃ | ಸ್ಯಾತಂ | ಸ್ಯಾತ |
| | ಸ್ಯಾಂ | ಸ್ಯಾವ | ಸ್ಯಾಮ ॥ |

| | | | |
|---|---|---|---|
| ಎರಡನೆಯದರ ರೂಪ:- | ಪಾತು, ಪಾತಾತ್ | ಪಾತಾಂ | ಪಾಂತು |
| | ಪಾಹಿ, ಪಾತಾತ್ | ಪಾತಂ | ಪಾತ |
| | ಪಾನಿ | ಪಾವ | ಪಾಮ ॥ 6 ॥ |

**ಗೋವಿಂದಾಖ್ಯೋಽಥ ತಾತಂ ಜಲಪತಿಹೃತಮಾನೀಯ ಲೋಕಂ ಸ್ವಕೀಯಂ**
**ನಂದಾದೀನಾಂ ಪ್ರದರ್ಶ್ಯ ವ್ರಜಗತವನಿತಾಃ ಗಾನಕೃಷ್ಟಾರ್ತಚಿತ್ತಾಃ ।**
**ಯಃ ಕಾಲಿಂದ್ಯಾಂ ನಿಶಾಯಾಮರಮಯದಮಲಜೋತ್ಸ್ನಯಾ ದೀಪಿತಾಯಾಂ**
**ಚಾರ್ವಂಗೀರ್ನರ್ಮವಾಕ್ಯೈಃ ಸ್ತನಭರನಮಿತಾಃ ಪ್ರೀಣಯನ್ ಪ್ರಿಯತಾಂ ನಃ ॥ 7 ॥**

**ಅನ್ವಯಾರ್ಥ :-** ಯಃ = ಯಾವ ಶ್ರೀಕೃಷ್ಣನು, ಅಥ = ಗೋವರ್ಧನ ಪರ್ವತವನ್ನು ಎತ್ತಿದ ನಂತರದಲ್ಲಿ ಗೋವಿಂದಾಖ್ಯಃ = ಗೋವಿಂದ ಎಂಬ ಅಭಿದಾನವನ್ನು ಹೊಂದಿ, ಜಲಪತಿಹೃತಂ = ಜಲಪತಿ = ಜಲಸ್ವಾಮಿಯಾದ ವರುಣನಿಂದ ಅಥವಾ ವರುಣ ಭೃತ್ಯನಾದ ಅಸುರನಿಂದ, ಹೃತಂ = ಅಪಹೃತನಾದ, ತಾತಂ = ತಂದೆಯಾದ ನಂದಗೋಪನನ್ನು, ಆನೀಯ = ಕರೆದುಕೊಂಡು ಬಂದು, ಸ್ವಕೀಯಂ ಲೋಕಂ = ತನ್ನ ಲೋಕವಾದ ವೈಕುಂಠವನ್ನು ನಂದಾದೀನಾಂ = ನಂದಗೋಪನೇ ಮೊದಲಾದವರಿಗೆ ಪ್ರದರ್ಶ್ಯ – ತೋರಿಸಿ, ಗಾನಕೃಷ್ಟಾರ್ತಚಿತ್ತಾಃ,- ಗಾನ = ವೇಣುಗಾನದಿಂದ, ಕೃಷ್ಟ= ಆಕರ್ಷಿಸಲ್ಪಟ್ಟ, ಆರ್ತ = ಮನ್ಮಥನಿಂದ ಪೀಡಿತವಾದ, ಚಿತ್ತಾಃ = ಮನಸ್ಸುಳ್ಳ, ಚಾರ್ವಂಗೀ: = ಮನೋಹರವಾದ ಅವಯವಗಳುಳ್ಳ, ಸ್ತನಭರನಮಿತಾಃ = ಸ್ತನಗಳ ಭಾರದಿಂದ ಬಗ್ಗಿರತಕ್ಕ ವ್ರಜಗತವನಿತಾಃ = ಗೋಕುಲದಲ್ಲಿರುವ ಗೋಪಸ್ತ್ರೀಯರುಗಳನ್ನು, ನರ್ಮವಾಕ್ಯೈಃ = ಪರಿಹಾಸವಚನಗಳಿಂದ, ಪ್ರೀಣಯನ್ – ಆನಂದಪಡಿಸುವವನಾಗಿ, ಕಾಲಿಂದ್ಯಾಂ = ಯಮುನೆಯ ಸಮೀಪದಲ್ಲಿ, ಅಮಲಜ್ಯೋತ್ಸ್ನಯಾ = ನಿರ್ಮಲ ಚಂದ್ರಿಕೆ (ಬೆಳದಿಂಗಳು) ಯಿಂದ ದೀಪಿತಾಯಾಂ – ಪ್ರಕಾಶಮಾನವಾದ, ನಿಶಾಯಾಂ = ರಾತ್ರಿಯಲ್ಲಿ, ಅರಮಯತ್ – ಕ್ರೀಡಿಸಿದನೋ (ಸಃ = ಅಂತಹ ಶ್ರೀ ಕೃಷ್ಣನು), ನಃ – ನಮಗೆ, ಪ್ರಿಯತಾಂ = ಪ್ರೀತನಾಗಲಿ.

**ವಿಗ್ರಹವಾಕ್ಯ :-** ಗೋವಿಂದ ಇತಿ ಆಖ್ಯಾಯಸ್ಯ ಸಃ ಗೋವಿಂದಾಖ್ಯಃ ॥ ಜಲಾನಾಂ ಪತಿಃ ಜಲಪತಿಃ, ಜಲಪತಿನಾ ಹೃತಃ ಜಲಪತಿಹೃತಃ, ತಮ್ ॥ ನಂದಃ ಆದಿಃ ಯೇಷಾಂತೇ ನಂದಾದಯಃ, ತೇಷಾಂ ನಂದಾದೀನಾಮ್ ॥ ವ್ರಜಂ ಗತಾಃ, ವ್ರಜಗತಾಃ ವ್ರಜಗತಾಶ್ಚ ತಾಃ ವನಿತಾಶ್ಚ ವ್ರಜಗತವನಿತಾಃ ತಾಃ ॥ ಗಾನೇನ ಕೃಷ್ಟಂ ಗಾನಕೃಷ್ಟಂ, ಆರ್ತಂ ಚ ತತ್ ಚಿತ್ತಂ ಚ ಆರ್ತಚಿತ್ತಂ, ಗಾನಕೃಷ್ಟಂ ಆರ್ತಚಿತ್ತಂ ಯಾಸಾಂತಃ ಗಾನಕೃಷ್ಟಾರ್ತ ಚಿತ್ತಾಃ ॥ ಅಮಲಾ ಚ ಸಾ ಜ್ಯೋತ್ಸ್ನಾ ಚ ಅಮಲಜ್ಯೋತ್ಸ್ನಾ, ತಯಾ ಅಮಲ ಜ್ಯೋತ್ಸ್ನಯಾ ॥ ಚಾರೂಣಿ ಅಂಗಾನಿ ಯಾಸಾಂ ತಾಃ ಚಾರ್ವ್ವಂಗ್ಯಃ ತಾಃ ಚಾರ್ವಂಗೀಃ ॥ ನರ್ಮಣಾಂ ವಾಕ್ಯಾನಿ ನರ್ಮವಾಕ್ಯಾನಿ ತೈಃ ನರ್ಮವಾಕ್ಯೈಃ ॥ ಸ್ತನಯೋಃ ಭರಃ ಸ್ತನಭರಃ, ತೇನ ನಮಿತಾಃ ಸ್ತನಭರನಮಿತಾಃ, ತಾಃ ಸ್ತನಭರನಮಿತಾಃ ॥

**ತಾತ್ಪರ್ಯ :-** ಗೋವರ್ಧನ ಪರ್ವತವನ್ನು ಎತ್ತಿ ಗೋಕುಲವಾಸಿಗಳಾದ ಸರ್ವರನ್ನೂ ರಕ್ಷಿಸಿದ್ದನ್ನು ಕಂಡು ಇಂದ್ರದೇವರು 'ಶ್ರೀ ಕೃಷ್ಣನು ಸಾಕ್ಷಾತ್ ನಾರಾಯಣಾವತಾರಿ'ಯೆಂದು ನಿಶ್ಚಯಿಸಿ ಕೋಪಮುಕ್ತನಾಗಿ ತಾನು ಮಾಡಿದ ಅಪರಾಧ ಶಾಂತ್ಯರ್ಥವಾಗಿ ಸುರಲೋಕದಲ್ಲಿದ್ದ ಕಲ್ಪವೃಕ್ಷ ಕಾಮಧೇನು ಮುಂತಾದ ಕಾಣಿಕೆಗಳೊಡನೆ ಬಂದು ಶ್ರೀ ಕೃಷ್ಣನಿಗೆ ಶರಣಾಗತನಾಗಿ ಕ್ಷೀರಾಭಿಷೇಕ ಮಾಡಿ. ವೇದ ವೇದಾನುಸಾರಿ ವಾಕ್ಯಗಳಿಂದ ಸ್ತುತಿಸಿದನು. ಶ್ರೀ ಕೃಷ್ಣನು ಅದರಿಂದ

ಪ್ರೀತನಾಗಿ ಇಂದ್ರನನ್ನು ಸಂತೋಷಪಡಿಸಿ ಕಳುಹಿಸಿಕೊಟ್ಟನು. ಅಂದಿನಿಂದ ಶ್ರೀ ಕೃಷ್ಣನಿಗೆ ''ಗೋವಿಂದ'' ಎಂಬ ಹೆಸರು ಉಂಟಾಯಿತು.

ಇದಾದ ಕೆಲದಿನಗಳು ಕಳೆದಮೇಲೆ ನಂದಗೋಪನು ಒಂದು ಏಕಾದಶೀ ದಿವಸ ಉಪವಾಸಮಾಡಿ ದ್ವಾದಶೀ ದಿವಸ ಸ್ನಾನಮಾಡಲು ಯಮುನಾಜಲದಲ್ಲಿ ಇಳಿದನು. ಅದು ಆಸುರೀ ಸಮಯವೆಂಬುದನ್ನು ಅವನು ತಿಳಿಯದೇ ಯಮುನೆ-ಯಲ್ಲಿ ಸ್ನಾನ ಮಾಡುತ್ತಿದ್ದಾಗ ಆಸುರೀ ವೇಳೆಯಲ್ಲಿ ಸ್ನಾನಮಾಡಲು ಬಂದನೆಂಬ ಕ್ರೋಧದಿಂದ ವರುಣದೇವರ ಭೃತ್ಯನಾದ ಅಸುರನು ನಂದಗೋಪನನ್ನು ಅಪಹರಿಸಿಕೊಂಡು ವರುಣ ಲೋಕಕ್ಕೆ ಕೊಂಡೊಯ್ದನು. ಇದನ್ನು ಕಂಡ ಗೋಪಾಲಕರು ಕೃಷ್ಣನಿಗೆ ತಿಳಿಸಿದರು. ಶ್ರೀ ಕೃಷ್ಣನು ವರುಣ ಲೋಕಕ್ಕೆ ಹೋಗಿ ವರುಣನಿಗೆ ''ತಿಳಿಯದೇ ಆದ ಘಟನೆ ಇದು'' ಎಂದು ಹೇಳಲು ವರುಣನು ನಂದಗೋಪನನ್ನು ಕ್ಷಮಿಸಿ, ಶ್ರೀ ಕೃಷ್ಣನನ್ನು ಪೂಜಿಸಿದನು. ನಂತರ ತಂದೆಯೊಡನೆ ಕೃಷ್ಣನು ಗೋಕುಲಕ್ಕೆ ಮರಳಿದನು.

ಮತ್ತೊಂದು ದಿನ ಶ್ರೀ ಕೃಷ್ಣನು ನಂದಾದಿಗಳಲ್ಲಿ ಅನುಗ್ರಹಮಾಡಿ ತನ್ನ ಮಹಿಮೆಯನ್ನು ಪ್ರದರ್ಶಿಸಲು ಬ್ರಹ್ಮಹ್ರದದಲ್ಲಿ ಸ್ನಾನಮಾಡಿದ ನಂದಗೋಪಾದಿಗಳಿಗೆ ದಿವ್ಯದೃಷ್ಟಿಯನ್ನು ಅನುಗ್ರಹಿಸಿ ಅಪ್ರಾಕೃತವಾದ, ಮುಕ್ತರಿಂದ ಮಾತ್ರ ಪ್ರಾಪ್ಯವಾದ ತನ್ನ ವೈಕುಂಠ ಲೋಕವನ್ನೂ, ಅಲ್ಲಿ ಛಂದೋಭಿಮಾನಿಗಳಾದ ದೇವತೆಗಳಿಂದ ಸ್ತೂಯಮಾನವಾದ ತನ್ನ ಮೂಲ-ರೂಪವನ್ನೂ ಅವರಿಗೆ ದರ್ಶನಮಾಡಿಸಿ ಆನಂದಗೊಳಿಸಿದನು.

ಅಂದು ರಾತ್ರಿ ಪೂರ್ಣಚಂದ್ರಿಕೆಯಿಂದ ಕಂಗೊಳಿಸುತ್ತಿದ್ದ ಯಮುನಾತೀರದಲ್ಲಿ ವಿರಾಜಮಾನವಾದ ಮನೋ-ಹರವಾದ ಕುಸುಮಿತ ವನವನ್ನು ಕ್ರೀಡಾರ್ಥವಾಗಿ ಪ್ರವೇಶಮಾಡಿ ಕಾಮವರ್ಧಕವಾದ ಮುರಳೀವಾದನ ಮಾಡುತ್ತಿರಲು ಆ ಮನಮೋಹಕ ವೇಣುನಾದವನ್ನು ಕೇಳಿ ಕಾಮಬಾಧೆಯಿಂದ ಆಕಳು ಕರೆಯುವುದು (ಹಾಲು ಕರೆಯುವುದು), ಮಕ್ಕಳನ್ನಾಡಿಸುವುದು, ಪತಿಸೇವೆ, ಬಡಿಸುವುದೇ ಮೊದಲಾದ ಕಾರ್ಯಾಸಕ್ತರಾಗಿದ್ದ ಗೋಪಸ್ತ್ರೀಯರು ಮೈಮರೆತು ತಾವು ಮಾಡುತ್ತಿದ್ದ ಕೆಲಸಗಳನ್ನೆಲ್ಲಾ ಬಿಟ್ಟು ಪತಿ-ಬಾಂಧವರು ವಿರೋಧಿಸುತ್ತಿದ್ದರೂ ಅದನ್ನು ಲೆಕ್ಕಿಸದೆ ಶ್ರೀ ಕೃಷ್ಣನ ಬಳಿಗೆ ಧಾವಿ-ಸಿದರು. ಶ್ರೀ ಕೃಷ್ಣನು ತನ್ನ ಸಮೀಪಕ್ಕೆ ಬಂದ ಆ ಸುರಸುಂದರಿಯರಾದ ಗೋಪಸ್ತ್ರೀಯರೊಡನೆ ವಿವಿಧ ಉಪಹಾಸ-ಪೂರ್ವಕವಾಗಿ ರಮಿಸಿ ಸರ್ವರನ್ನೂ ಆನಂದಗೊಳಿಸಿದನು. ಇಂಥ ಶ್ರೀ ಕೃಷ್ಣನು ನಮ್ಮಲ್ಲಿ ಪ್ರೀತನಾಗಲಿ.

**ವ್ಯಾಕರಣ ವಿಶೇಷ**

ಶ್ರೀ ಮಂತ್ರಾಲಯ ಶ್ರೀಪಾದಂಗಳವರು ಈ ಕಾವ್ಯದಲ್ಲಿ ''ಸ್ತನಭರನಮಿತಾಃ'' ಎಂಬ ವೈದಿಕ ಪದಪ್ರಯೋಗವನ್ನು ಮಾಡಿರುವುದು ತಾವು ವೇದವ್ಯಾಖ್ಯಾನ ಕುಶಲರೆಂಬುದನ್ನು ಧ್ವನಿಗೊಳಿಸುತ್ತಿರುವಂತಿದೆ. ಶ್ರೀಸೂಕ್ತದಲ್ಲಿ ''ಯಾ ಸಾ ಪದ್ಮಾಸನಸ್ಥಾ...... ಸ್ತನಭರನಮಿತಾ'' ಎಂಬ ಪ್ರಯೋಗ ಕಂಡುಬಂದಿದೆ. ಅದು ಪ್ರಾಮಾಣಿಕ ಪ್ರಯೋಗವೆಂಬುದನ್ನು ಸಂಪ್ರದಾಯಾರ್ಥ ಕೋವಿದರಾದ ಶ್ರೀ ಗುರುರಾಜರು ಪ್ರಯೋಗಿಸಿರುವುದನ್ನು ಕಂಡು ಭಕ್ತರಿಗೆ ಅವರಲ್ಲಿ ವಿಶೇಷ ಭಕ್ತಿಯುಂಟಾಗುತ್ತದೆ. ಈ ರೀತಿ ಅವರನ್ನು ತಿಳಿದವರಿಗೆ ಅವರ ವಿಶೇಷಾನುಗ್ರಹವಾಗುವುದರಲ್ಲಿ ಸಂದೇಹವಿಲ್ಲ.

''ಸ್ತನಭರನಮಿತಾಃ'' - ಇದು ಗೋಪಿಯರಿಗೆ ವಿಶೇಷಣ. ಇಲ್ಲಿ ಭರ ಶಬ್ದದ ರೂಪನಿಷ್ಪತ್ತಿಯನ್ನು ತೋರಿಸಿದ್ದಾರೆ. ಅದು ಹೀಗಿದೆ. ''ಭೃಞ್ ಭರಣೇ'' ಎಂಬ ಧಾತು ಋದಂತವೂ ಭ್ವಾದಿಗಣದಲ್ಲಿ ಪಠಿತವೂ ಆಗಿದೆ. ಈ ಧಾತುವಿನ ಮೇಲೆ ಭಾವಾರ್ಥದಲ್ಲಿ ಘಞ್ ಪ್ರತ್ಯಯ ಬಂದಿದೆ. ಇದು ಆತ್ಮನೇಪದಿ ಧಾತುವಾದುದರಿಂದ ''ಋದೋರಪ್'' ಎಂಬ ಸೂತ್ರದಿಂದ ''ಅಪ್'' ಪ್ರತ್ಯಯ ಬಂದಿದೆ. ಭೃಞ್ + ಅ ಎಂದಿರುವಾಗ ಧಾತುವಿನ ಕೊನೆಯ ಇಕಾರವು ಲೋಪವಾಗಿ ಭೃ

+ ಅ ಎಂದಾಗಿ, ಈಗ ''ಸಾರ್ವಧಾತುಕಾರ್ಧಧಾತುಕಯೋಃ'' ಎಂಬ ಸೂತ್ರದಿಂದ ಗುಣಬಂದು ಭರ್ + ಅ ''ಭರ'' ಎಂದು ರೂಪವಾಗಿದೆ. ಸೂತ್ರಕಾರರಾದ ಪಾಣಿನಿ ಆಚಾರ್ಯರು ಇದೇ ರೀತಿಯನ್ನೇ ಅಷ್ಟಾಧ್ಯಾಯಿ ಸೂತ್ರಪಾಠದ ಏಳನೇ ಅಧ್ಯಾಯದ ಎರಡನೆಯ ಪಾದದ 49ನೆಯ ಸೂತ್ರದಲ್ಲಿ ''ಸನೀವಂತರ್ಧಭ್ರಸ್ಜದಂಭುಶ್ರೀಸ್ವೃಯೂರ್ಣುಭರಜ್ಞಪಿಸನಾಂ'' ಎಂಬಲ್ಲಿ ''ಭರ'' ಶಬ್ದವನ್ನೇ ಕಂಠತಃ ಹೇಳಿದ್ದಾರೆ. ಮತ್ತು ''ವೃತ್ತಿ ಮಂಜರಿ'' ಯಲ್ಲಿಯೂ ಸಹ ಇದಕ್ಕೆ ಸಂವಾದಿಯಾಗಿಯೇ ಹೇಳಿದ್ದಾರೆ.

ಈ ವ್ಯಾಕರಣ ವಿಶೇಷಗಳನ್ನು ಶ್ರೀ ಲಕ್ಷ್ಮೀನಾರಾಯಣಾಚಾರ್ಯರು ತಮ್ಮ ವ್ಯಾಖ್ಯಾನದಲ್ಲಿ ಅಲ್ಲಲ್ಲಿ ಬಿಡಿಸಿ ವಿವರಿಸಿರುವುದನ್ನು ಕಾಣಬಹುದು. ಇದರಿಂದ ವ್ಯಾಕರಣ ಶಾಸ್ತ್ರದಲ್ಲಿ ಅವರಿಗಿರುವ ಮಹಾಪಾಂಡಿತ್ಯ ವ್ಯಕ್ತವಾಗುತ್ತದೆ.

**ಅಲಂಕಾರಗಳು :-** ಇಲ್ಲಿಯೂ ಹಿಂದಿನಂತೆ ''ಕಾವ್ಯಲಿಂಗಾದಿ'' ಅಲಂಕಾರಗಳಲ್ಲದೆ ''ಪರಿಕರಾಲಂಕಾರ''ವೂ ಇದೆ. ಶ್ರೀಕೃಷ್ಣನು ಗೋವರ್ಧನ ಪರ್ವತವನ್ನು ಎತ್ತಿಹಿಡಿದು ಗೋವುಗಳನ್ನು ಸಂರಕ್ಷಿಸಿರುವುದರಿಂದಲೂ ಶ್ರೀಕೃಷ್ಣನ ಸರ್ವೋತ್ತಮತ್ವವನ್ನು ತಿಳಿದ ಇಂದ್ರನು ವೇದವಾಕ್ಯಗಳಿಂದ ಸ್ತುತಿಸಿರುವುದರಿಂದಲೂ ಸಾಭಿಪ್ರಾಯ ವಿಶೇಷಣಗಳನ್ನು ಕೊಟ್ಟು ವರ್ಣಿಸಿರುವುದರಿಂದ ಇಲ್ಲಿ ''ಪರಿಕರಾಲಂಕಾರ''ವಾಗುತ್ತದೆ.

**ಲಕ್ಷಣ :-** ''ಅಲಂಕಾರಃ ಪರಿಕರ ಸಾಭಿಪ್ರಾಯವಿಶೇಷಣೈಃ ।''

**ಉದಾ :-** ಸುಧಾಂಶುಕಲಿತೋತ್ತಂಸಸ್ತಾಪಂ ಹರತುವಶ್ಶಿವಃ ॥ '' *–ಚಂದ್ರಾಲೋಕ*

**ಲಕ್ಷಣ :-** ''ಪರಿಕ್ರಿಯಾ ತಂದಕೂರೌಸಾಕೂತೌ ಧರ್ಮಧರ್ಮಿಣೌ ।''

**ಉದಾ :-** ''ಸುರೇಂದ್ರಸೂನೋಃ ಪುರತಃ ಕಸ್ಥಾತಾ ವಿಜಯೀಂದ್ರತೇ ॥ '' –ಅಲಂಕಾರ ಮಂಜರೀ

ಶ್ರೀಕೃಷ್ಣನು ಗೋವರ್ಧನ ಪರ್ವತವನ್ನೆತ್ತಿ ಗೋವುಗಳನ್ನು ಸಂಗೋಪಿಸಿ ಗೋಗಣದಿಂದ ಪ್ರತಿಪಾದ್ಯನಾದುದ-ರಿಂದಲ್ಲವೇ ಗೋವಿಂದನೆಂಬ ನಾಮ ಪಡೆದುದು?

ಇಲ್ಲಿ ''ಅರಮಯತ್'', ''ಪ್ರೀಯತಾಂ'' ಎಂಬೆರಡು ಕ್ರಿಯಾಪದಗಳಿವೆ. ಮೊದಲನೆಯದು ''ರಮು-ಕ್ರೀಡಾಯಾಂ'' ಎಂಬ ಧಾತುವಿನ ಣಿಜಂತದಲ್ಲಿ ಸಕರ್ಮಕ ಕರ್ತರಿ ಲಙ್ ಪರಸ್ಮೈಪದಿ ಪ್ರಥಮಪುರುಷ ಏಕವಚನದ ರೂಪವೂ, ಎರಡನೆಯದು ''ಪ್ರೀಙ್–ಪ್ರೀತೌ'' ಎಂದ ದಾತುವಿನ ಸಕರ್ಮಕ ಕರ್ತರಿ ಲೋಟ್ ಆತ್ಮನೇಪದಿ ಪ್ರಥಮಪುರುಷ ಏಕವಚನದ ಪ್ರೀಯತಾಂ ಎಂಬ ರೂಪವೂ ಆಗಿದೆ.

| | | | |
|---|---|---|---|
| ಮೊದಲನೆಯದರ ರೂಪ:- | ಅರಮಯತ್ | ಅರಮಯತಾಂ | ಅರಮಯನ್ |
| | ಅರಮಯಃ | ಅರಮಯತಂ | ಅರಮಯತ |
| | ಅರಮಯಂ | ಅರಮಯಾವ | ಅರಮಯಾಮ |
| ಎರಡನೆಯದರ ರೂಪ :- | ಪ್ರೀಯತಾಂ | ಪ್ರಿಯೇತಾಂ | ಪ್ರೀಯತಾಂ |
| | ಪ್ರೀಯಸ್ವ | ಪ್ರೀಯೇಥಾಂ | ಪ್ರೀಯಧ್ವಂ |
| | ಪ್ರೀಯೈ | ಪ್ರೀಯಾವಹೈ | ಪ್ರೀಯಾಮಹೈ ॥ |

॥ 7 ॥

**ಅಂತರ್ಧತ್ತೇ ಸ್ಮ ತಾಸಾಂ ಮದಹರಣಕೃತೇ ತ್ವೇಕಯಾ ಕ್ರೀಡಮಾನಃ**
**ಸ್ವಸ್ಕಂಧಾರೋಹಣಾದ್ಯೈಃ ಪುನರಪಿ ಪಿಹಿತೋ ಗರ್ವಶಾಂತ್ಯೈ ಮೃಗಾಕ್ಷ್ಯಾಃ ।**
**ಖಿನ್ನಾನಾಂ ಗೋಪಿಕಾನಾಂ ಬಹುವಿಧನುತಿಭಿರ್ಯೋ ವಹನ್ ಪ್ರೀತಿಮಾವಿಃ**
**ಪ್ರಾಪ್ತೋ ರಾಸೋತ್ಸವೇನ ನ್ಯರಮಯದಬಲಾಃ ಪ್ರೀಯತಾಂ ಮೇ ಹರಿಸ್ಸಃ ॥ 8 ॥**

**ಅನ್ವಯಾರ್ಥ :-** ಯಃ = ಯಾವ ಕೃಷ್ಣನು, ತಾಸಾಂ = ಆ ಗೋಪಿಕಾಸ್ತ್ರೀಯರ, ಮದಹರಣಕೃತೇ = ಗರ್ವಪರಿಹಾರಕ್ಕೋಸ್ಕರವಾಗಿ, ಅಂತರ್ಧತ್ತೇಸ್ಮ = ಅದೃಶನಾದನೋ, ಏಕಯಾ = ಒಬ್ಬ ಗೋಪಿಕಾಸ್ತ್ರೀಯಿಂದ ಸ್ವಸ್ಕಂಧಾರೋಹಣಾದ್ಯೈಃ - ಸ್ವ = ತನ್ನ, ಸ್ಕಂಧ = ಭುಜಗಳ ಮೇಲೆ, ಆರೋಹಣ = ಏರಿಸಿಕೊಳ್ಳುವುದೇ, ಆದ್ಯೈಃ = ಮುಂತಾದ ವ್ಯಾಪಾರಗಳಿಂದ, ಕ್ರೀಡಮಾನಃ = ವಿಹರಿಸುವವನಾಗಿ, ಮೃಗಾಕ್ಷ್ಯಾಃ = ಸಾರಂಗಾಕ್ಷಿಯ, ಗರ್ವಾಶಾಂತ್ಯೈ = ಅಹಂಕಾರ ಪರಿಹಾರಕ್ಕಾಗಿ, ಪುನರಪಿ = ಮತ್ತು, ಪಿಹಿತಃ = ಅಂತರ್ಧಾನ ಹೊಂದಿ, ಖಿನ್ನಾನಾಂ = ದುಃಖಿತರಾದ, ಗೋಪಿಕಾನಾಂ = ಗೋಪಸ್ತ್ರೀಯರ, ಬಹುವಿಧನುತಿಭಿಃ = ಅನೇಕ ವಿಧವಾದ ಸ್ತೋತ್ರಗಳಿಂದ, ಪ್ರೀತಿಂ = ಸಂತೋಷವನ್ನು, ವಹನ್ = ಉಂಟುಮಾಡುವವನಾಗಿ, ಆವಿಃಪ್ರಾಪ್ತಃ = ಆವಿರ್ಭೂತನಾಗಿ, ರಾಸೋತ್ಸವೇನ = ರಾಸಕ್ರೀಡೆಯೆಂಬ ಉತ್ಸವದಿಂದ, ಅಬಲಾಃ = ಸ್ತ್ರೀಯರನ್ನು, ಅರಮಯತ್ = ರಮಿಸಿದನೋ (ಕ್ರೀಡಿಸಿದನೋ), ಸಃ = ಅಂತಹ ಕೃಷ್ಣನು, ಮೇ = ನನ್ನಲ್ಲಿ, ಪ್ರೀಯತಾಂ = ಪ್ರೀತನಾಗಲಿ.

**ವಿಗ್ರಹವಾಕ್ಯ :-** ಮದಸ್ಯ ಹರಣಂ ಮದಹರಣಂ, ಮದಹರಣಸ್ಯಕೃತೇ ಮದಹರಣ ಕೃತೇ, ಅಥವಾ ಮದಹರಣಂ ಇತಿ ಕೃತ್ ಮದಹರಣಕೃತ್ ತಸ್ಯೈ ಮದಹರಣ ಕೃತೇ, ॥ ಸ್ವಸ್ಯ ಸ್ಕಂಧಃ ಸ್ವಸ್ಕಂಧಃ ಸ್ವಸ್ಕಂಧೇ ಆರೋಹಣಂ ಸ್ವಸ್ಕಂಧಾ- ರೋಹಣಂ ಸ್ವಸ್ಕಂಧಾರೋಹಣಂ ಆದ್ಯಂ ಯೇಷಾಂ ತೇ ಸ್ವಸ್ಕಂಧಾರೋಹಣಾದ್ಯಾಃ ತೈಃ ಸ್ವ ಸ್ಕಂಧಾರೋಹಣಾದ್ಯೈಃ । ಗರ್ವಸ್ಯ ಶಾಂತಿಃ ತಸ್ಯೈ ಗರ್ವಶಾಂತ್ಯೈ ॥ ಮೃಗಸ್ಯ ಅಕ್ಷಿಣೀ ಇವ ಅಕ್ಷಿಣೀ ಯಸ್ಯಾಸ್ಸಾಮೃಗಾಕ್ಷೀ ತಸ್ಯಾಃ ಮೃಗಾಕ್ಷ್ಯಾಃ । ಬಹುವಿಧಾಶ್ಚತಾಃ ನುತಯಶ್ಚ ಬಹುವಿಧನುತಯಃ ತಾಭಿಃ ಬಹುವಿಧನುತಿಭಿಃ । ರಾಸಾಖ್ಯಶ್ಚಾಸೌ ಉತ್ಸವಶ್ಚ ರಾಸೋತ್ಸವಃ ತೇನ ರಾಸೋತ್ಸವೇನ ॥

**ತಾತ್ಪರ್ಯ :-** ತಂಗಿರಣನ ಚಂದ್ರಿಕೆಯ ಚಲ್ವಿನಿಂದ ಕಂಗೊಳಿಸುವ ಯಮುನಾ ತೀರದ ನಿಕುಂಜಗಳಲ್ಲಿ ಸುರಸುಂದರಿಯರಾದ ಗೋಪಭಾಮೆಯರೊಡನೆ ವಿಹರಿಸುತ್ತಿದ್ದ ಶ್ರೀ ಕೃಷ್ಣನು ತನ್ನ ಅಂಗಸುಖದಿಂದ ಗರ್ವಗೊಂಡಿರುವ ಗೋಪಬಾಲಿಕೆಯರ ಅಹಂಕಾರವನ್ನು ಪರಿಹರಿಸಿ ಅವರಲ್ಲಿ ಅನುಗ್ರಹಮಾಡಲು ಅದೃಶ್ಯನಾಗಿ ಒಬ್ಬ ಮುಗ್ಧಳಾದ ಗೋಪಬಾಲೆಯೊಡನೆ ರಹಸ್ಯವಾಗಿ ಸಂಚರಿಸುತ್ತಾ ಕೆಲದೂರ ಹೋಗಲು ಆ ಬಾಲೆಯು ಶ್ರೀ ಕೃಷ್ಣನು ತನ್ನೊಬ್ಬಳಲ್ಲೇ ಹೆಚ್ಚು ಅನುರಕ್ತನಾಗಿದ್ದಾನೆ ಎಂಬ ಅಹಂಭಾವದಿಂದ ''ಕೃಷ್ಣ! ನಾನು ಮುಂದೆ ನಡೆಯಲಾರೆ. ಕಾಲುಗಳು ನೋಯುತ್ತಿವೆ. ನನ್ನಲ್ಲಿ ನಿನಗೆ ಪ್ರೇಮವಿದ್ದರೆ ನನ್ನನ್ನು ನಿನ್ನ ಭುಜದಮೇಲೆ ಕೂಡಿಸಿಕೊಂಡು ನಿನಗಿಷ್ಟ ಬಂದಲ್ಲಿಗೆ ನಡೆ'' ಎಂದು ಬಿಂಕದಿಂದ ನುಡಿಯಲು ಶ್ರೀ ವಾಸುದೇವನು ಅದರಂತೆಯೇ ಅವಳನ್ನು ಭುಜದ ಮೇಲೇರಿಸಿಕೊಂಡು ಕೆಲದೂರ ನಡೆದು ಅವಳೊಡನೆ ಕ್ರೀಡಿಸಿ ಅವಳ ಗರ್ವವನ್ನು ಕಳೆಯಲು ಅದೃಶ್ಯನಾದನು. ಹೀಗೆ ಶ್ರೀಕೃಷ್ಣನು ಕಣ್ಣಿಗೆ ಕಾಣದಂತಾಗಲು ಎಲ್ಲ ಗೋಪಸ್ತ್ರೀಯರು ಅವನನ್ನು ಹುಡುಕುತ್ತಾ ಎಲ್ಲರೂ ಒಂದೆಡೆ ಸಂಧಿಸಿ ತಮ್ಮ ತಮ್ಮ ಅನುಭವಗಳನ್ನು ಪರಸ್ಪರ ಹೇಳಿಕೊಂಡು ತಾವು ಮಾಡಿದ ಅಪರಾಧದಿಂದ ಶ್ರೀಕೃಷ್ಣ ಅಂತರ್ಧಾನನಾದನೆಂದು ಅರಿತು ಕೃಷ್ಣನನ್ನು ಕಾಣಲು ತವಕಗೊಂಡು ಎಲ್ಲ ಕಡೆ ಹುಡುಕುತ್ತಾ ಯಮುನಾ ತೀರಕ್ಕೆ ಬಂದು ''ಜಯಂತಿ ತೇಽಧಿಕಂ'' ಮುಂತಾದ ಅನೇಕವಿಧ ಸ್ತೋತ್ರಗಳಿಂದ ಶ್ರೀಕೃಷ್ಣನನ್ನು ಸ್ತುತಿಸಿದರು.

ಇದರಿಂದ ಶ್ರೀಕೃಷ್ಣನು ''ತಾಸಾಮಾವಿರಭೂತ್‌ಶೌರಿಃ'' ಎಂಬಂತೆ ಅಂದರೆ ಮುಗುಳುನಗೆಯಿಂದ ಅರಳಿದ ಮುಖ-ಕಮಲದಿಂದ ಕೂಡಿದ, ಪೀತಾಂಬರಧಾರಿಯಾದ, ಲೋಕಮೋಹಕನಾದ ಮನ್ಮಥನಿಗೆ ಮನ್ಮಥನಾದ ಶ್ರೀಕೃಷ್ಣನು ಗೋಪಸ್ತ್ರೀಯರ ಮುಂದೆ ಆವಿರ್ಭವಿಸಿ (ಪ್ರತ್ಯಕ್ಷನಾಗಿ) ಆನಂದಕರವಾದ ಸರಸಸಲ್ಲಾಪಗಳಿಂದ ಅವರ ಸಕಲ ದುಃಖವನ್ನು ಪರಿಹರಿಸಿ ಅವರೊಡನೆ ''ಪಾದನ್ಯಾಸೈರ್ಭುಜವಿಧುತಿಭಿಃ ಸಸ್ಮಿತ ಭ್ರೂವಿಲಾಸೈಃ'' ಮುಂತಾಗಿ ಹೇಳಿರುವ ಕ್ರಮದಿಂದ ರಾಸಕ್ರೀಡೋತ್ಸವವನ್ನು ನಡೆಸಿ ಸಕಲರನ್ನೂ ಸಂತೋಷಪಡಿಸಿದನು. ಅಂತಹ ಶ್ರೀ ಕೃಷ್ಣನು ನನ್ನಲ್ಲಿ ಪ್ರೀತನಾಗಲಿ ಎಂದು ಭಾವ.

**ಅಲಂಕಾರವು :-** ಇಲ್ಲಿ ಶ್ರೀಕೃಷ್ಣನು ಗೋಪಿಕೆಯರೊಡನೆ ನಡೆಸಿದ ರತಿಲೀಲೆಯ ಉತ್ಕರ್ಷವನ್ನು ವರ್ಣಿಸಿ-ರುವುದರಿಂದ ''ಸಾರಾಲಂಕಾರ''ವಿದೆ. ಬೆಳದಿಂಗಳಲ್ಲಿ ಒಬ್ಬ ಗೋಪಿಕೆಯೊಡನೆ ಒಂದು ಕುಂಜದಲ್ಲಿ ಒಂದು ರೀತಿಯಿಂದ ವಿಹರಿಸಿ ಅದೃಶ್ಯನಾದುದು. ಒಂದು ಬಗೆಯ ಉತ್ಕರ್ಷ, ಬಳಿಕ ಪ್ರತಿ ಕುಂಜದಲ್ಲಿಯೂ ಪ್ರತಿ ಗೋಪಿಕೆಯರೊಡನೆಯೂ ವಿಹರಿಸಿದ್ದು ಮತ್ತೊಂದು ಬಗೆಯ ಉತ್ಕರ್ಷ. ಹೀಗೆ ಇಲ್ಲಿ ಉದ್ದಕ್ಕೂ ಉತ್ತರೋತ್ತರೋತ್ಕರ್ಷವನ್ನು ವರ್ಣಿಸಿರುವುದರಿಂದ ಇಲ್ಲಿ ''ಸಾರಾಲಂಕಾರ'' ವಿದೆ.

**ಲಕ್ಷಣ :-** ''ಉತ್ತರೋತ್ತರಮುತ್ಕರ್ಷಃ ಸಾರ ಇತ್ಯಭಿಧೀಯತೇ ।''

**ಉದಾ :-** ''ಮಧುರಂ ಮಧುಪೀಯೂಷಂ ತಸ್ಮಾತ್ತಸ್ಮಾತ್ಕವೇರ್ವಚಃ ॥ ''

ಇಲ್ಲಿಯೂ ''ನ್ಯರಮಯತ್'', ''ಪ್ರೀಯತಾಂ'' ಎಂಬ ಕ್ರಿಯಾಪದಗಳ ರೂಪಗಳನ್ನು ಪೂರ್ವದಂತೆಯೇ ಮನಗಾಣಬೇಕು. ॥ 8 ॥

**ಹತ್ವಾ ಯಶ್ಶಂಖಚೂಡಂ ಮಣಿಮಥ ಸಮದಾದಗ್ರಜಾಯಾರ್ತಗೋಪೀ**
**ಗೀತಾನೇಕಸ್ವಲೀಲೋ ಹೃತವೃಷಭಮಹಾಪೂರ್ವದೇವೋಽಮರೇಡ್ಯಃ ।**
**ಕೇಶಿಪ್ರಾಣಾಪಹಾರೀ ಸುರಮುನಿವದನಪ್ರಾರ್ಥಿತಾಶೇಷಕೃತ್ಯೋ**
**ಹತ್ವಾ ಪುತ್ರಂ ಮಯಸ್ಯ ಸ್ವಜನಮಪಿಹಿತಂ ಮೋಚಯನ್ ಮೋಕ್ಷದಃ ಸ್ಯಾತ್ ॥ 9 ॥**

**ಅನ್ವಯಾರ್ಥ :-** ಯಃ = ಯಾವ ಶ್ರೀಕೃಷ್ಣನು, ಅಥ = ಅನಂತರದಲ್ಲಿ, ಶಂಖಚೂಡಂ = ಶಂಖಚೂಡ ಎಂದ ದೈತ್ಯನನ್ನು, ಹತ್ವಾ = ಸಂಹಾರಮಾಡಿ, ಮಣಿಂ = ಅವನ ಶಿರದಲ್ಲಿದ್ದ ನವರತ್ನವನ್ನು, ಅಗ್ರಜಾಯ = ಅಣ್ಣನಾದ ಬಲರಾಮನಿಗೆ, ಸಮದಾತ್ = ಕೊಟ್ಟನು. ಆರ್ತಗೋಪೀಗೀತಾನೇಕಸ್ವಲೀಲಃ, ಆರ್ತ = ದುಃಖಿತರಾದ, ಗೋಪೀ = ಗೋಪಿಕಾಸ್ತ್ರೀಯರಿಂದ, ಗೀತ = ಗಾನಮಾಡಲ್ಪಟ್ಟ, ಅನೇಕ = ಬಹು ವಿಧವಾದ, ಸ್ವಲೀಲಃ = ತನ್ನ ವ್ಯಾಪಾರ (ಚರಿತ್ರೆ) ಗಳುಳ್ಳ, ಹೃತವೃಷಭ ಮಹಾಪೂರ್ವದೇವಃ, ಹೃತ = ಕೊಲ್ಲಲ್ಪಟ್ಟ, ವೃಷಭ = ವೃಷಭನಾಮಕನಾದ, ಮಹಾಪೂರ್ವ ದೇವಃ = ಮಹಾದೈತ್ಯನುಳ್ಳ, ಅಮರೇಡ್ಯಃ = ಇಂದ್ರಾದಿ ದೇವತೆಗಳಿಂದ ಸ್ತುತ್ಯನಾದ, ಕೇಶಿಪ್ರಾಣಾಪಹಾರೀ, ಕೇಶಿ = ಕೇಶಿ ಎಂಬ ಅಸುರನ, ಪ್ರಾಣಾಪಹಾರೀ = ಪ್ರಾಣವನ್ನು ಅಪಹರಿಸಿದ, ಸುರಮುನಿವದನ ಪ್ರಾರ್ಥಿತಾಶೇಷಕೃತ್ಯಃ, ಸುರಮುನಿ = ದೇವರ್ಷಿಯಾದ ನಾರದನ, ವದನ = ಮುಖದಿಂದ, ಪ್ರಾರ್ಥಿತ = ಪ್ರಾರ್ಥಿಸಲ್ಪಟ್ಟ, ಅಶೇಷಕೃತ್ಯಃ = ಭಾವಿ ಸಕಲವ್ಯಾಪಾರಗಳುಳ್ಳ, ಮಯಸ್ಯ = ಮಯಾಸುರನ, ಅಪತ್ಯಂ = ಮಗನನ್ನು, ಹತ್ವಾ = ಸಂಹಾರ ಮಾಡಿ, ಅಪಿಹಿತಂ = ಪರ್ವತದ ಗುಹೆಯಲ್ಲಿ ಬಚ್ಚಿಟ್ಟಿದ್ದ, ಸ್ವಜನಂ = ತನ್ನವರಾದ ಜನರನ್ನು, ಮೋಚಯನ್ = ಬಂಧನದಿಂದ ಬಿಡಿಸಿದ, ಸಃ =

ಅಂತಹ ಶ್ರೀಕೃಷ್ಣನು, (ಮಮ = ನನಗೆ), ಮೋಕ್ಷದಃ = ಸಂಸಾರವೆಂಬ ಗಂಭೀರ ಗುಹೆಯಲ್ಲಿ ಪ್ರವೇಶಿಸುವುದ-ರಿಂದುಂಟಾದ, ಸಮಸ್ತ ಕ್ಲೇಶಪರಿಹಾರಕನು (ಸ್ವರೂಪಾನಂದಾವಿರ್ಭಾವ ರೂಪ ಮುಕ್ತಿಯನ್ನು ಕೊಡುವವನು), ಸ್ಯಾತ್ = ಆಗಲಿ.

**ವಿಗ್ರಹವಾಕ್ಯ :-** ಅಗ್ರೇ ಜಾಯತ ಇತ್ಯಗ್ರಜಃ, ತಸ್ಮೈ = ಅಗ್ರಜಾಯ । ಆರ್ತಾಶ್ಚ ತಾಃ ಗೋಪ್ಯಶ್ಚ ಆರ್ತಗೋಪ್ಯಃ ತಾಭಿಃ ಗೀತಾಃ – ಆರ್ತಗೋಪೀಗೀತಾಃ, ಸ್ವಸ್ಯಲೀಲಾಃ ಸ್ವಲೀಲಾಃ, ಅನೇಕಾಶ್ಚ ತಾಃ ಸ್ವಲೀಲಾಶ್ಚ ಅನೇಕಸ್ವಲೀಲಾಃ, ಆರ್ತಗೋಪೀಗೀತಾಃ ಅನೇಕ ಸ್ವಲೀಲಾಃ ಯಸ್ಯ ಸಃ-ಆರ್ತ ಗೋಪೀಗೀತಾನೇಕಸ್ವಲೀಲಃ । ಮಹಾಂಶ್ಚಾಸೌ ಪೂರ್ವದೇವಶ್ಚ ಮಹಾಪೂರ್ವದೇವಃ, ವೃಷಭಾಖ್ಯಶ್ಚಾಸೌ ಮಹಾಪೂರ್ವದೇವಶ್ಚ ವೃಷಭಮಹಾಪೂರ್ವದೇವಃ, ಹೃತಃ ವೃಷಭಮಹಾಪೂರ್ವದೇವಃ ಯೇನ ಸಃ, ಹೃತವೃಷಭಮಹಾಪೂರ್ವದೇವಃ । ಅಮರೈಃ ಈಡ್ಯಃ ಅಮರೇಡ್ಯಃ । ಕೇಶಿನಃ ಪ್ರಾಣಾಃ ಕೇಶಿಪ್ರಾಣಾಃ ತಾನ್ ಅಪಹರತಿ ಇತಿ – ಕೇಶಿಪ್ರಾಣಾಪಹಾರೀ । ಸುರಾಣಾಂ ಮುನಿಃ, ತಸ್ಯವದನಂ, ಸುರಮುನಿವದನಂ, ತೇನ ಪ್ರಾರ್ಥಿತಾನಿ ಸುರಮುನಿ ವದನಪ್ರಾರ್ಥಿತಾನಿ, ಅಶೇಷಾಣಿ ಚ ತಾನಿ ಕ ತ್ಯಾನಿ ಚ ಅಶೇಷಕೃತ್ಯಾನಿ ಸುರಮುನಿ. ವದನಪ್ರಾರ್ಥಿತಾನಿ ಅಶೇಷಕೃತ್ಯಾನಿ ಯಸ್ಯ ಸಃ – ಸುರಮುನಿವದನ ಪ್ರಾರ್ಥಿತಾಶೇಷ ಕೃತ್ಯಃ। ಮೋಕ್ಷಂದದಾತಿ ಇತಿ ಮೋಕ್ಷದಃ ॥

**ತಾತ್ಪರ್ಯ :-** ಶ್ರೀಕೃಷ್ಣನು ಒಂದು ದಿನ ರಾತ್ರಿ ಬಲರಾಮನಿಂದ ಸಹಿತನಾಗಿ ಕುಸುಮಿತ ವನದಲ್ಲಿ ಗೋಪಿಕಾ-ಸ್ತ್ರೀಯರೊಡನೆ ಕಲೆತು ಮುರಳೀನಾದಾದಿಗಳಿಂದ ವಿಹರಿಸುತ್ತಿದ್ದನು. ಆ ಸಮಯದಲ್ಲಿ ತನ್ನ ಸಮೀಪದಲ್ಲಿ ಮುರಳೀ-ನಾದವನ್ನಾಲಿಸುತ್ತಾ ಮೈ ಮರೆತು ನಿಂತಿದ್ದ ಗೋಪಾಂಗನೆಯರನ್ನು ರುದ್ರದೇವರ ಪ್ರಸಾದದಿಂದ ಗರ್ವಿತನಾದ ಶಂಖ-ಚೂಡನೆಂಬ ದೈತ್ಯನು ಹೆದರಿಸುತ್ತಿರುವುದನ್ನು ಕಂಡು ಶ್ರೀಕೃಷ್ಣನು ಅವನನ್ನು ಸಂಹಾರಮಾಡಿ ಅವನ ಶಿರದಲ್ಲಿದ್ದ ಮಣಿಯನ್ನು ಕಿತ್ತು ತೆಗೆದು ಅಣ್ಣನಾದ ಬಲರಾಮನಿಗೆ ಕೊಟ್ಟು ಎಲ್ಲರನ್ನೂ ಆನಂದಗೊಳಿಸಿದನು. ಮತ್ತೊಂದು ದಿನ ಪ್ರತಿದಿನದಂತೆ ಗೋವುಗಳೊಡನೆ ವನದಲ್ಲಿ ಸಂಚಾರ ಮಾಡುತ್ತಿದ್ದ ಸಮಯದಲ್ಲಿ ಗೋಕುಲದ ವ್ರಜಸುಂದರಿಯರು ಶ್ರೀ ಕೃಷ್ಣನ ಮುಖಾರವಿಂದದ ದರ್ಶನವಿಲ್ಲದೇ ದುಃಖಿತರಾಗಿ ''ವಾಮಬಾಹುಕೃತವಾಮಕಪೋಲೋ'' ಇತ್ಯಾದಿಯಾಗಿ ಕೃಷ್ಣನ ಚರಿತ್ರೆಯನ್ನು ಅನೇಕ ಪ್ರಕಾರವಾಗಿ ಸ್ತೋತ್ರಮಾಡಿದಾಗ ಅವರಿಗೆ ದರ್ಶನವಿತ್ತು ಸಂತೋಷಪಡಿಸಿದನು.

ಇನ್ನೊಂದು ದಿವಸ ಗೋಕುಲದ ಜನರನ್ನು ಹಿಂಸಿಸಲು ಕಂಸನಿಂದ ಪ್ರೇರಿತನಾಗಿ ಬಂದ ರುದ್ರದೇವರ ವರಬಲದಿಂದ ಅವಧ್ಯನಾದ ಕಂಸಸೇವಕನಾದ ವೃಷಭನೆಂಬ ಅಸುರರನ್ನು ಸಂಹರಿಸಿ ಗೋಪಸ್ತ್ರೀಯರ ಭಯವನ್ನು ಪರಿಹರಿಸಿದನು. ಮತ್ತೊಮ್ಮೆ ಪಾರ್ವತೀದೇವಿಯ ವರದಿಂದ ಅವಧ್ಯನಾದ ಕುದುರೆಯ ಆಕಾರದ ಕೇಶೀ ಎಂಬ ಹೆಸರಿನ ದೈತ್ಯನು ಭಕ್ಷಿಸಲು ತನ್ನ ಮುಖವನ್ನು ತೆರೆದುಕೊಂಡು ಶ್ರೀಕೃಷ್ಣನ ಸಮೀಪಕ್ಕೆ ಬಂದನು. ಶ್ರೀ ಕೃಷ್ಣನು ತೆರೆದ ಬಾಯಿಯಿಂದ ಧಾವಿಸಿಬಂದ ಕೇಶಿಯ ಬಾಯೊಳಗೆ ತನ್ನ ಬಾಹುವನ್ನು ಪ್ರವೇಶಿಸಿ ಅದು ಅಲ್ಲಿ ಬೃಹದಾಕಾರವಾಗಿ ಬೆಳೆಯುವಂತೆ ಮಾಡಿ ಅವನಿಗೆ ಉಸಿರುಕಟ್ಟುವಂತೆ ಮಾಡಿ ಸಂಹರಿಸಿದನು. ಶ್ರೀ ಬ್ರಹ್ಮಾದಿಗಳು ಅಸುರ ಸಂಹಾರಕನಾದ ಶ್ರೀಕೃಷ್ಣನಮೇಲೆ ಹೂಮಳೆಗರೆದು ಸ್ತೋತ್ರ ಮಾಡಿದರು.

ಕೆಲಕಾಲವಾದ ಮೇಲೆ ಒಂದು ದಿನ ನಾರದ ಮಹರ್ಷಿಗಳು ದೇವತೆಗಳ ಕಾರ್ಯಕ್ಕಾಗಿ ಬಂದು ಶ್ರೀ ಕೃಷ್ಣನಿಗೆ ದೇವತೆಗಳ (ಕಾರ್ಯಕ್ಕಾಗಿ) ಹಿತಕ್ಕಾಗಿ ನೀನು ಕಂಸವಧೆ ಮುಂತಾದ ಕಾರ್ಯವನ್ನು ಕೈಗೊಂಡು ದುಷ್ಟಶಿಕ್ಷಣ ಶಿಷ್ಟರಕ್ಷಣಮಾಡಿ ಲೋಕಕಲ್ಯಾಣ ಮಾಡಬೇಕು ಮುಂತಾಗಿ ವಿಜ್ಞಾಪಿಸಿದರು. ಶ್ರೀ ಕೃಷ್ಣನು ಅವರು ಹೇಳಿದಂತೆ ಮಾಡುವುದಾಗಿ ಅಭಯವಿತ್ತು ಕಳುಹಿಸಿದನು.

ಮತ್ತೆ ಒಂದು ದಿನ ಪರ್ವತದ ತಪ್ಪಲಿನಲ್ಲಿ ಗೋವುಗಳನ್ನು ಮೇಯಿಸುತ್ತಾ ಎಲ್ಲ ಗೋಪಾಲಕರನ್ನು ಕರೆದು ಕಣ್ಣಾಮುಚ್ಚಾಲೆ (ಕೆಲವರು ಕಳ್ಳರು, ಮತ್ತೆ ಕೆಲವರು ಪುರಜನರು, ಕಳ್ಳರನ್ನು ಕಾಯುವ ಸಿಪಾಯಿಗಳು, ಮತ್ತೆ ಕೆಲವರು ಅವರನ್ನು ಬಿಡಿಸುವವರು ಹೀಗೆ ಆಡುವ) ಆಟವನ್ನಾಡುತ್ತಿರಲು ಆಡುಗಳ ವೇಷಧರಿಸಿದ ಕೆಲ ಗೋಪಾಲಕರನ್ನು ಆಟವಾಡುವವನಂತೆ ಗೋಪಾಲಕ ವೇಷಧರಿಸಿ ಬಂದಿದ್ದ ಮಯಾಸುರನ ಮಗನಾದ ವ್ಯೋಮ ಎಂಬ ರಾಕ್ಷಸನು ಚೋರ ವೇಷಧರಿಸಿ ಅವರನ್ನು ಪರ್ವತದ ಗುಹೆಯಲ್ಲಿ ಬಚ್ಚಿಟ್ಟು ದೊಡ್ಡ ಶಿಲೆಯಿಂದ ಅದನ್ನು ಮುಚ್ಚಿ ಮತ್ತೆ ಉಳಿದ ಗೋಪಾಲಕರನ್ನು ಹಿಡಿಯಲು ಉದ್ಯುಕ್ತನಾದಾಗ ಶ್ರೀಕೃಷ್ಣನು ಬ್ರಹ್ಮದೇವರ ವರದಿಂದ ಅವಧ್ಯನಾದ ವ್ಯೋಮನೆಂಬ ಮಹಾಸುರನೇ ಇವನು ಎಂಬುದನ್ನು ಅರಿತು ಕೂಡಲೇ ಅವನನ್ನು ಸಂಹಾರ ಮಾಡಿ ಗುಹೆಗೆ ಮುಚ್ಚಿದ್ದ ಬಂಡೆಗಲ್ಲನ್ನು ಭೇದಿಸಿ ಸರ್ವ ಗೋಪಾಲಕರನ್ನೂ ಹೊರಗೆ ತಂದು ರಕ್ಷಿಸಿ ಬ್ರಹ್ಮಾದಿಗಳಿಂದಲೂ ಗೋಪಾಲಕರಿಂದಲೂ ಸ್ತುತ್ಯನಾಗಿ ಸರ್ವರೊಡನೆ ಗೋಕುಲಕ್ಕೆ ಬಂದು ಸಕಲರನ್ನೂ ಆನಂದಪಡಿಸಿ ತಾನೂ ಸುಖವಾಗಿದ್ದನು. ಅಂತಹ ಶ್ರೀಕೃಷ್ಣನು ಸಂಸಾರಗಹ್ವರ ಗುಹೆಯನ್ನು ಪ್ರವೇಶಿಸಿ ಕ್ಲೇಶಪಡುತ್ತಿರುವ ನಮ್ಮನ್ನು ಮುಕ್ತಗೊಳಿಸಲಿ (ಮೋಕ್ಷಪ್ರದನಾಗಲಿ) ಎಂದು ಭಾವ.

**ಅಲಂಕಾರಗಳು :-** ಇಲ್ಲಿಯೂ ಚರಿತ್ರೆ ಉತ್ತರೋತ್ತರ ಉತ್ಕರ್ಷವನ್ನು ಹೊಂದಿರುವುದರಿಂದ ಸಾರಾಲಂಕಾರವಿದೆ. ಲಕ್ಷಣವನ್ನು ಹಿಂದೆಯೇ ವರ್ಣಿಸಲಾಗಿದೆ.

ಇಲ್ಲಿ ಅದಾತ್ ಮತ್ತು ಸ್ಯಾತ್ ಎಂಬ ಎರಡು ಕ್ರಿಯಾಪದಗಳಿವೆ. ಮೊದಲನೆಯದು ''ಡುಧಾಞ್‌ದಾನೆ'' ಎಂಬ ಧಾತುವಿನ ಸಕರ್ಮಕ ಕರ್ತರಿ ಲುಙ್ ಪರಸ್ಮೈಪದಿ ಪ್ರಥಮ ಪುರುಷ ಏಕವಚನದ ರೂಪ. ಇದಕ್ಕೆ ಸಂ ಎಂಬ ಉಪಸರ್ಗವು ಸೇರಿ ''ಸಮದಾತ್'' ಎಂದಾಗಿದೆ.

| | | | |
|---|---|---|---|
| **ರೂಪ :-** | ಅದಾತ್ | ಅದಾತಾಂ | ಅದುಃ |
| | ಅದಾಃ | ಅದಾತು | ಅದಾತ |
| | ಅದಾಂ | ಅದಾವ | ಅದಾಮ |

ಎರಡನೆಯದರ ರೂಪವನ್ನೂ ಧಾತ್ವರ್ಥವನ್ನೂ ಹಿಂದೆಯೇ ಕೊಡಲಾಗಿದೆ ॥ 9 ॥

**ಅಕ್ರೂರಾಕಾರಿತೋ ಯಾನ್ ವ್ರಜಯುವತಿಜನಾನ್ ಸಾಂತ್ವಯಿತ್ವಾಽಭಿತಪ್ತಾನ್**
**ಸ್ವಂ ರೂಪಂ ಮಜ್ಜತೇಽಸ್ಮೈ ವಿಲಸಿತಮಹಿಗಂ ದರ್ಶಯಂಸ್ತೇನ ವಂದ್ಯಃ ।**
**ಯೋ ಗತ್ವಾ ಕಂಸಧಾನೀಂ ಹೃತರಜಕಶಿರಾಶ್ಚಾರುವೇಷಸ್ಸುದಾಮ್ನಃ**
**ಪ್ರೀತಿಂ ಕುರ್ವಂಸ್ತ್ರಿವಕ್ರಾಂ ವ್ಯತನುತ ರುಚಿರಾಂ ಪೌರಮಹ್ಯೋಽವತಾತ್ಸಃ ॥ 10 ॥**

**ಅನ್ವಯಾರ್ಥ :-** ಯಃ = ಯಾವ ಕೃಷ್ಣನು, ಅಕ್ರೂರಾಕಾರಿತಃ, ಅಕ್ರೂರ = ಅಕ್ರೂರನಿಂದ, ಆಕಾರಿತಃ = ಆಹ್ವಾನಿಸಲ್ಪಟ್ಟವನಾಗಿ, ಯಾನ್ = ಮಧುರೆಯನ್ನು ಕುರಿತು ಹೊರಟವನಾಗಿ, ಅಭಿತಪ್ತಾನ್ = ದುಃಖಿತರಾದ, ವ್ರಜಯುವತಿಜನಾನ್, ವ್ರಜ = ಗೋಕುಲದಲ್ಲಿರುವ, ಯುವತಿಜನಾನ್ = ತರುಣಿಯರಾದ ಗೋಪಸ್ತ್ರೀಯರನ್ನು ಸಾಂತ್ವಯಿತ್ವಾ = ಸಮಾಧಾನಪಡಿಸಿ ಮಜ್ಜತೇ = ಸ್ನಾನಮಾಡುತ್ತಿರುವ, ಅಸ್ಮೈ = ಅಕ್ರೂರನಿಗೆ, ವಿಲಸಿತಂ = ಪ್ರಕಾಶ-ಮಾನವಾದ, ಅಹಿಗಂ = ಆದಿಶೇಷನಲ್ಲಿದ್ದ ಸ್ವಂ ರೂಪಂ, = ತನ್ನ ಮೂಲರೂಪವನ್ನು ದರ್ಶಯನ್ = ತೋರಿಸಿ, ತೇನ =

ಅವನಿಂದ (ಅಕ್ರೂರನಿಂದ) ವಂದ್ಯಃ = ನಮಸ್ಕರಿಸಲ್ಪಟ್ಟವನಾಗಿ, (ಸ್ತೋತ್ರ ಮಾಡಿಸಿ ಕೊಳ್ಳಲ್ಪಟ್ಟವನಾಗಿ) ಕಂಸಧಾನೀಂ = ಕಂಸನ ರಾಜಧಾನಿಯಾದ ಮಧುರೆಯನ್ನು, ಗತ್ವಾ = (ಹೋಗಿ) ಸೇರಿ, ಹೃತರಜಕಶಿರಾಃ = ಹೃತ = ಕತ್ತರಿಸಲ್ಪಟ್ಟ, ರಜಕ = ಅಗಸರವನ ಶಿರಾಃ = ಶಿರಸ್ಸುಳ್ಳವನಾಗಿ, ಚಾರುವೇಷಃ = ಮನೋಹರವಾದ ಅಲಂಕಾರ ಉಳ್ಳವನಾಗಿ, ಸುದಾಮ್ನಃ = ಸುದಾಮನೆಂಬ ತನ್ನ ಭಕ್ತನಿಗೆ, ಪ್ರೀತಿಂ ಕುರ್ವನ್ = ಸಂತೋಷವನ್ನುಂಟುಮಾಡುವವನಾಗಿ, ತ್ರಿವಕ್ರಾಂ = ಕುಬ್ಜಳಾದ ಸೈರಂಧ್ರಿಯೆಂಬ ಸ್ತ್ರೀಯನ್ನು, ರುಚಿರಾಂ = ಸುಂದರಳನ್ನಾಗಿ (ಮನೋಹರ ರೂಪವುಳ್ಳವಳನ್ನಾಗಿ) ವ್ಯತನುತ = ಮಾಡಿದನೋ, ಪೌರಮಹ್ಯಃ = ಮಧುರಾಪುರ ಜನರಿಂದ ಪೂಜಿತನಾದ, ಸಃ = ಅಂತಹ ಶ್ರೀಕೃಷ್ಣನು (ಮಾಂ = ನನ್ನನ್ನು), ಅವತಾತ್ = ರಕ್ಷಿಸಲಿ.

**ವಿಗ್ರಹವಾಕ್ಯ :-** ಯುವತಯಃ ಇತಿಜನಾಃ ಯುವತಿಜನಾಃ ವ್ರಜೇ ಯುವತಿಜನಾಃ, ತಾನ್ ವ್ರಜಯುವತಿಜನಾನ್ । ಅಹಿಂ ಗಚ್ಛತೀತಿ ಅಹಿಗಂ ತತ್ ಅಹಿಗಮ್ । ಕಂಸಃ ಧೀಯತೇ ಅಸ್ಯಾಂ ಇತಿ ಕಂಸಧಾನೀ ತಾಂ ಕಂಸಧಾನೀಮ್ । ರಜಕಸ್ಯ ಶಿರಃ ರಜಕಶಿರಃ, ಹೃತಂ ರಜಕಶಿರಃ ಯೇನ ಸಃ – ಹೃತರಜಕಶಿರಾಃ । ಚಾರವಃ ವೇಷಾಃ ಯಸ್ಯ ಸಃ ಚಾರುವೇಷಃ । ಮಹಯಿತುಂ ಯೋಗ್ಯಃ ಮಹ್ಯಃ, ಪುರೇಭವಾಃ ಪೌರಾಃ, ತೈಃ ಮಹ್ಯಃ ಪೌರಮಹ್ಯಃ ॥

**ತಾತ್ಪರ್ಯ :-** ಗೋಕುಲನಾಥನಾದ ಶ್ರೀಕೃಷ್ಣನು ಅನೇಕ ಅದ್ಭುತ ವ್ಯಾಪಾರಗಳನ್ನು ಮಾಡುತ್ತಾ ಸಜ್ಜನರಿಗೆ ಆನಂದವನ್ನುಂಟು ಮಾಡುತ್ತಿರಲು ಸುರಕಾರ್ಯಕ್ಕಾಗಿ ದೇವರ್ಷಿಗಳಾದ ನಾರದರು ಕಂಸನ ಬಳಿಗೆ ಬಂದು ವಸುದೇವನು ಶ್ರೀಕೃಷ್ಣನನ್ನು ಗೋಕುಲಕ್ಕೆ ಕರೆದುಕೊಂಡು ಹೋದುದೇ ಮೊದಲಾದ ವಿಚಾರಗಳನ್ನೆಲ್ಲಾ ಅವನಿಗೆ ಹೇಳಿದರು. ನಾರದರ ಮಾತನ್ನು ಕೇಳಿ ಕೋಪಗೊಂಡ ಕಂಸನು ದೇವಕೀವಸುದೇವರಿಗೆ ಬೇಡಿ ಹಾಕಿಸಿ ಕಾರಾಗೃಹದಲ್ಲಿರಿಸಿ, ತನ್ನ ಮಂತ್ರಿಯಾದ ಅಕ್ರೂರನನ್ನು ಕರೆದು "ನೀನು ಗೋಕುಲಕ್ಕೆ ಹೋಗಿ ಧನುರ್ಮಹೋತ್ಸವದ ನೆಪದಿಂದ ಬಲರಾಮ ಶ್ರೀಕೃಷ್ಣರನ್ನು ಇಲ್ಲಿಗೆ ಕರೆದುಕೊಂಡು ಬಾ, ನಾನವರನ್ನು ಸಂಹರಿಸುತ್ತೇನೆ" ಎಂದು ಹೇಳಿ ಅಕ್ರೂರನನ್ನು ಗೋಕುಲಕ್ಕೆ ಕಳುಹಿಸಿದನು. ಅಕ್ರೂರನು (ಪೂರ್ವದಲ್ಲಿ ಕಿಶೋರನಾಮಕನಾದ ದೇವ ಗಾಯಕನಾಗಿದ್ದನು.) ಸ್ವಾಯಂಭುವ ಮನುವಿನ ಪರಮಾಂಶಯುಕ್ತನೂ ಮತ್ತು ಚತುರ್ಮುಖ ಬ್ರಹ್ಮದೇವರ ಆವೇಶಯುಕ್ತನೂ ಆಗಿದ್ದನು. ಶ್ರೀಕೃಷ್ಣ ಸೇವಾರ್ಥವಾಗಿ ಈಗ ಜನಿಸಿದ್ದನು. ಅಂತಹ ಅಕ್ರೂರನು ಕಂಸನ ಅಪ್ಪಣೆಯಂತೆ ಶ್ರೀಕೃಷ್ಣನನ್ನು ನೋಡಬೇಕೆಂಬ ಉತ್ಸಾಹಪೂರ್ಣ ಮನಸ್ಸಿನಿಂದ ರಥದಲ್ಲಿ ಕುಳಿತು ಗೋಕುಲಕ್ಕೆ ಹೋಗಿ ಬಲರಾಮನಿಂದ ಸಹಿತನಾದ ಶ್ರೀಕೃಷ್ಣನಿಗೆ ನಮಸ್ಕಾರ ಮಾಡಿ ಅವನಿಂದ ಆದೃತನಾಗಿ ಕಂಸನು ಮಾಡುತ್ತಿರುವ ಅತ್ಯಾಚಾರಾದಿ ಸರ್ವವಿಚಾರಗಳನ್ನೂ ನಿರೂಪಿಸಿ ಮಧುರೆಗೆ ಬರಬೇಕೆಂದು ಆಹ್ವಾನಿಸಿದನು.

ಶ್ರೀಕೃಷ್ಣನು ಬಲರಾಮನೊಡನೆ ರಥದಲ್ಲಿ ಕುಳಿತು ನಂದಾದಿ ಸರ್ವಜನರೊಡನೆ ಮಧುರೆಗೆ ಹೊರಟು, ತನ್ನ ವಿರಹದಿಂದ ದುಃಖಿತರಾದ ಗೋಪಸ್ತ್ರೀಯರು ಅಡ್ಡಗಟ್ಟಿ "ಹೋಗಬೇಡ" ಎಂದು ಪ್ರಾರ್ಥಿಸಲು ಅವರಿಗೆ ಮತ್ತೆ ಬರುವುದಾಗಿ ಹೇಳಿ ಸಮಾಧಾನಪಡಿಸಿ ಅವರನ್ನು ಕಳುಹಿಸಿಕೊಟ್ಟು ಗೋಕುಲದಿಂದ ಬೀಳ್ಕೊಂಡು ಹೊರಟು, ಯಮುನಾ ತೀರಕ್ಕೆ ಬಂದು, ಅಲ್ಲಿ ಸ್ನಾನ ಮಾಡುತ್ತಿರುವ ಅಕ್ರೂರನಿಗೆ ವೈಕುಂಠದಲ್ಲಿ ಶೇಷಶಾಯಿಯಾಗಿ ರಾರಾಜಿಸುತ್ತಿರುವ ತನ್ನ ಮೂಲರೂಪವನ್ನು ಮತ್ತೆ ಮತ್ತೆ ದರ್ಶನ ಮಾಡಿಸಿ, ಮಹಾಮಹಿಮೆಯನ್ನರಿತ ಅಕ್ರೂರನಿಂದ ಸ್ತುತ್ಯನಾಗಿ ಮಧುರೆಗೆ ಬಂದು ಅಕ್ರೂರನನ್ನು ಮುಂದಾಗಿ ಕಳುಹಿಸಿಕೊಟ್ಟು, ಅಲ್ಲಿದ್ದ ಉಪವನದಲ್ಲಿ ಆಹ್ನಿಕಾದಿಗಳನ್ನು ಮಾಡಿಕೊಂಡು ಅಪರಾಹ್ನದಲ್ಲಿ ಗೋಪಾಲಕರೊಡನೆ ಮಧುರಾ ನಿರೀಕ್ಷಣ ಕುತೂಹಲದಿಂದ ರಾಜಮಾರ್ಗದಲ್ಲಿ ಹೊರಟು ಆ ಮಾರ್ಗವಾಗಿ ಆನೆಯ ಮೇಲೆ ಕುಳಿತು ಬರುತ್ತಿದ್ದ ಕಂಸಭೃತ್ಯನಾದ ರಜಕ (ಅಗಸ) ನನ್ನು "ನನಗೆ ವಸ್ತ್ರಗಳನ್ನು ಕೊಡು" ಎಂದು ಕೇಳಿದಾಗ ಅವನು ಕೊಡುವುದಿಲ್ಲವೆಂದು ತಿರಸ್ಕರಿಸಿದಾಗ ಆ ರಜಕನ ಶಿರಸ್ಸನ್ನು ಕರಾಗ್ರದಿಂದ ಛೇದಿಸಿ ತನಗೆ

ಬೇಕಾದ ವಸ್ತ್ರಗಳನ್ನು ತೆಗೆದುಕೊಂಡು ಉಳಿದ ವಸ್ತ್ರಗಳನ್ನು ಗೋಪಾಲಕರಿಗೆ ಕೊಟ್ಟನು. ತರುವಾಯ ವಾಯಕನಿಂದ (ಮಂಗಳಕಾರನಿಂದ) ಅನೇಕ ವಿಧವಾಗಿ ಅಲಂಕೃತನಾಗಿ ನಂತರ ಹೂಗಾರ (ಮಾಲೆ ಕಟ್ಟುವವನು) ನಾದ ಸುದಾಮನ ಮನೆಗೆ ಹೋಗಿ ಅವನಿಂದ ಪೂಜಿತನಾಗಿ ಅವನಿತ್ತ ಪುಷ್ಪಹಾರಾದಿಗಳಿಂದ ಅಲಂಕೃತನಾಗಿ ಅವರಿಬ್ಬರನ್ನೂ ತನ್ನ ವೈಕುಂಠದ ದ್ವಾರ ಪಾಲಕರಾಗುವಂತೆ ಅನುಗ್ರಹಿಸಿ ಅಲ್ಲಿಂದ ರಾಜಬೀದಿಯಲ್ಲಿ ಬರುತ್ತಿರುವಾಗ ಪರಿಮಳ ದ್ರವ್ಯವನ್ನು ಹಿಡಿದು ಬರುತ್ತಿರುವ ಕಂಸನ ದಾಸಿಯಾದ (ಕಂಸಧಾತ್ರಿಯಾದ) ಸೈರಂಧ್ರೀ ಎಂಬ ಕುಬ್ಜೆಯನ್ನು ನೋಡಿ ಅವಳನ್ನು ''ಸುಗಂಧವನ್ನು ಕೊಡು'' ಎಂದು ಕೇಳಿದನು. ಕುಬ್ಜೆಯು ಆನಂದದಿಂದ ಶ್ರೀಕೃಷ್ಣನಿಗೆ ಪರಿಮಳದ್ರವ್ಯಗಳನ್ನು ನೀಡಲು ಆ ಸುಗಂಧವನ್ನು ತನ್ನ ಅಂಗಾಂಗಗಳಿಗೆ ಪೂಸಿಕೊಂಡು ಅವಳಲ್ಲಿ ಪ್ರಸನ್ನನಾಗಿ ತ್ರಿವಕ್ರೆಯಾದವಳನ್ನು ಸ್ಪರ್ಶ ಮಾತ್ರದಿಂದ ಸುಂದರಿಯನ್ನಾಗಿಸಿ, ಅವಳು ತನ್ನ ಮನೆಗೆ ಬರಬೇಕೆಂದು ಪ್ರಾರ್ಥಿಸಲು ಉಪಹಾಸಪೂರ್ವಕವಾಗಿ ''ಖಂಡಿತ ನಿನ್ನ ಮನೆಗೆ ಬರುತ್ತೇನೆ'' ಎಂದು ಅಭಯ ವಚನವಿತ್ತು ಅವಳನ್ನು ಕಳುಹಿಸಿ ತನ್ನ ದರ್ಶನಕ್ಕಾಗಿ ಬಂದ ಮಧುರಾಪುರದ ಸ್ತ್ರೀಪುರುಷರಿಂದ ಗಂಧಪುಷ್ಪಾಕ್ಷತಗಳಿಂದ ಪೂಜಿತನಾಗಿ ಸರ್ವರನ್ನೂ ಸಂತೋಷಗೊಳಿಸಿದನು. ಅಂಥ ಶ್ರೀಕೃಷ್ಣನು ನನ್ನನ್ನು ಕಾಪಾಡಲಿ ಇತ್ಯಾದಿ ಕಥೆಯು ಈ ಪದ್ಯದಿಂದ ಸೂಚಿತವಾಗುವುದು.

**ಅಲಂಕಾರ :-** ಪೂರ್ವದಂತೆ ಇಲ್ಲಿಯೂ ಸಾರ - ಪ್ರಹರ್ಷಣ - ವಿಷಮ - ವಿಭಾವನಾ ಕಾವ್ಯಲಿಂಗ ಮುಂತಾದ ಅಲಂಕಾರಗಳಿವೆ.

ಅಕ್ರೂರನಿಗೆ ಅಪ್ರಯತ್ನವಾಗಿ ಶ್ರೀಹರಿಯ ಮೂಲರೂಪ ದರ್ಶನವಾಯಿತು ಎಂದು ವರ್ಣಿಸಿರುವುದರಿಂದ ''ಪ್ರಹರ್ಷಣಾಲಂಕಾರ''ವೂ ಉತ್ತರೋತ್ತರ ಉತ್ಕರ್ಷವನ್ನು ವರ್ಣಿಸಿರುವುದರಿಂದ ''ಸಾರಾಲಂಕಾರವೂ'' ಶಿರಚ್ಛೇದಕ್ಕೆ ಕಾರಣವಲ್ಲದ ಹಸ್ತಾಗ್ರದಿಂದ ರಜಕನ ಶಿರಚ್ಛೇದವಾಯಿತೆಂದು ವರ್ಣಿಸಿರುವುದರಿಂದ ''ವಿಭಾವನಾಲಂಕಾರವೂ'' ಅಗಸನಿಗೆ ವಸ್ತ್ರಗಳನ್ನು ಕಂಸನಿಗೆ ಕೊಡುವುದು ಇಷ್ಟ ಅದಕ್ಕೆ ವಿರುದ್ಧವಾಗಿ ಅವು ಕೃಷ್ಣನಿಗೆ ಸಂದಿದ್ದು ಮತ್ತು ಅಗಸನ ಮರಣ ಮುಂತಾದ ಅನಿಷ್ಟಗಳು ಆದವು ಎಂದು ವರ್ಣಿಸಿರುವುದರಿಂದ ''ವಿಷಮಾಲಂಕಾರವೂ'' ಸಮರ್ಥನೀಯವಾದ ಅರ್ಥ-ವನ್ನು ಸಮರ್ಥಿಸಿರುವುದರಿಂದ ಕಾವ್ಯಲಿಂಗಾಲಂಕಾರಗಳೂ ಇವೆ.

ವಿಷಮಾಲಂಕಾರದ ಲಕ್ಷಣ :- ''ಅನಿಷ್ಟಸ್ಯಾಪ್ಯವ್ಯಾಪ್ತಿಶ್ಚ ತದಿಷ್ಟಾರ್ಥ ಸಮುದ್ಯಮಾತ್''.

**ಉದಾ :-** ಭಕ್ಷ್ಯಾಶಯಾಹಿಮಂಜೂಷಾಂದಷ್ಟ್ವಾಽಽಖುಸ್ತೇನ ಭಕ್ಷಿತಃ

ಇವೆಲ್ಲದರ ಸಮ್ಮಿಲನದಿಂದ ಸಂಸೃಷ್ಟಿಯಾಗಿದೆ. ಇಲ್ಲಿ ''ವ್ಯತನುತ'' ''ಅವತಾತ್'' ಎಂಬ ಎರಡು ಕ್ರಿಯಾಪದಗಳಿವೆ. ಮೊದಲನೆಯದು ''ವಿ'' ಉಪಸರ್ಗ ಪೂರ್ವಕ 'ತನು ವಿಸ್ತಾರೇ' ಎಂಬ ಧಾತುವಿನ ಸಕರ್ಮಕಕರ್ತರಿ ಲಙ್ ಪರಸ್ಮೈಪದಿ ಪ್ರಥಮಪುರುಷ ಏಕವಚನರೂಪ.

| | | | |
|---|---|---|---|
| **ರೂಪ :-** | ಅತನುತ | ಅತನ್ವಾತಾಂ | ಅತನ್ವತ |
| | ಅತನುಥಾಃ | ಅತನ್ವಾಥಾಂ | ಅತನುಧ್ವಂ |
| | ಅತನ್ವಿ | ಅತನುವಹಿ | ಅತನುಮಹಿ |
| | | ಅತನ್ವಹಿ | ಅತನ್ಮಹಿ |

ಎರಡನೆಯದರ ರೂಪವನ್ನು ಹಿಂದೆಯೇ ಕೊಟ್ಟಿದೆ ॥ 10 ॥

**ಶಾರ್ವಂ ಭಂಕ್ತ್ವಾ ಧನುರ್ಯೋ ಬಲಮಪಿ ಧನುಷೋ ರಕ್ಷಕಂ ಕುಂಜರಂ ತಂ**
**ಮಲ್ಲಾಂಶ್ಚಾಣೂರಪೂರ್ವಾನಪಿ ಸಹಸಹಜೋ ಮರ್ದಯಸ್ತುಂಗಮಂಚಾತ್ ।**
**ಭೋಜೇಶಂ ಪಾತಯಿತ್ವಾ ವ್ಯಸುಮಕೃತ ನಿಜಾನ್ನಂದಯನ್ ಪ್ರಾಪ್ಯ ಗರ್ಗಾತ್**
**ದ್ವೈಜಂ ಸಂಸ್ಕಾರಮಾಪ್ತೋ ಗುರುಮಥ ವಿದಿತಾಽಶೇಷವಿದ್ಯೋಽವತಾನ್ನಃ ॥ 11 ॥**

**ಅನ್ವಯಾರ್ಥ :-** ಯಃ = ಯಾವ ಕೃಷ್ಣನು, ಸಹ ಸಹಜಃ = ಅಣ್ಣನಾದ ಬಲರಾಮನಿಂದ ಕೂಡಿಕೊಂಡು, ಶಾರ್ವಂ = ಶಿವಸಂಬಂಧಿಯಾದ, ಧನುಃ = ಬಿಲ್ಲನ್ನು, ಭಂಕ್ತ್ವಾ = ಮುರಿದು, ಧನುಷಃ = ಬಿಲ್ಲಿನ, ರಕ್ಷಕಂ = ರಕ್ಷಕನನ್ನು, ಬಲಮಪಿ = ಕಂಸಭೃತ್ಯರಾದ ಸೈನಿಕರನ್ನೂ, (ಧನುಷಃ ರಕ್ಷಕಂ = ಧನುಸ್ಸಿನ ರಕ್ಷಕರಾದ, ಬಲಮಪಿ = ಕಂಸನ ಸೈನಿಕರನ್ನೂ) ಭಂಕ್ತ್ವಾ = ಸದೆಬಡಿದು, ತಂ = ಪ್ರಸಿದ್ಧವಾದ, ಕುಂಜರಂ = ಕುವಲಯಾಪೀಡವೆಂಬ ಗಜವನ್ನು ಚಾಣೂರಪೂರ್ವಾನ್ = ಚಾಣೂರನೇ ಮೊದಲಾದ, ಮಲ್ಲಾನಪಿ = ಮಲ್ಲರುಗಳನ್ನೂ ಕೂಡ, ಮರ್ದಯನ್ = ಅರೆದು ಹಾಕಿ, ತುಂಗಮಂಚಾತ್ = ಉನ್ನತವಾದ ಮಂಚದಿಂದ, ಭೋಜೇಶಂ = ಭೋಜದೇಶಾಧಿಪತಿಯಾದ ಕಂಸನನ್ನು, ಪಾತಯಿತ್ವಾ = ಕೆಳಗೆ ಕೆಡವಿ, ವ್ಯಸುಂ = ಗತಪ್ರಾಣನನ್ನಾಗಿ, ಅಕೃತ = ಮಾಡಿದನು, ನಿಜಾನ್ = ತಂದೆಯಾದ ವಸುದೇವನೇ ಮೊದಲಾದ ಸ್ವೀಯ ಜನರನ್ನು, ನಂದಯನ್ = ಸಂತೋಷ ಪಡಿಸುವವನಾಗಿ, ಗರ್ಗಾತ್ - ಗರ್ಗಾಚಾರ್ಯರಿಂದ, ದ್ವೈಜಂ ಸಂಸ್ಕಾರಂ = ಉಪನಯನ ಸಂಸ್ಕಾರವನ್ನು, ಪ್ರಾಪ್ಯ = ಹೊಂದಿ, ಅಥ = ಅನಂತರದಲ್ಲಿ ಗುರುಂ = ಸಾಂದೀಪಿನಿ ನಾಮಕಗುರುಗಳನ್ನು, ಆಪ್ತಃ - ಹೊಂದಿದವನಾಗಿ, ವಿದಿತಾಶೇಷವಿದ್ಯಃ = ವಿದಿತಃ = ತಿಳಿಯಲ್ಪಟ್ಟ, ಅಶೇಷ = ಸಮಸ್ತವಾದ, ವಿದ್ಯಃ = ವಿದ್ಯೆಯುಳ್ಳ, ಸಃ = ಆ ಶ್ರೀಕೃಷ್ಣನು ನಃ = ನಮ್ಮನ್ನು ಅವತಾತ್ = ಕಾಪಾಡಲಿ.

**ವಿಗ್ರಹವಾಕ್ಯ :-** ಶರ್ವಸ್ಯ, ಇದಂ - ಶಾರ್ವಂ, ತತ್ ಶಾರ್ವಮ್ । ಚಾಣೂರಃ ಪೂರ್ವಃ ಯೇಷಾಂತೇ ಚಾಣೂರಪೂರ್ವಃ ತಾನ್ । ಸಹಜಾಯತ ಇತಿ ಸಹಜಃ । ತುಂಗಶ್ಚಾಸೌ ಮಂಚಶ್ಚ - ತುಂಗಮಂಚಃ, ತಸ್ಮಿನ್ । ಭೋಜಸ್ಯ ಈಶಃ - ಭೋಜೇಶಃ, ತಮ್ । ವಿಗತಾಃ ಅಸವಃ ಯಸ್ಯ ಸಃ - ವ್ಯಸುಃ ತಮ್ । ದ್ವಿಜಸ್ಯ ಅಯಂ - ದ್ವೈಜಃ ತಮ್ । ಅಶೇಷಾಶ್ಚ ತಾಃ ವಿದ್ಯಾಶ್ಚ ಅಶೇಷವಿದ್ಯಾಃ, ವಿದಿತಾಃ ಅಶೇಷವಿದ್ಯಾಃ ಯೇನಸಃ - ವಿದಿತಾಶೇಷವಿದ್ಯಃ.

**ತಾತ್ಪರ್ಯ :-** ಶ್ರೀಕೃಷ್ಣನು ಬಲರಾಮನೊಡನೆ ಹಿಂದೆ ನಿರೂಪಿಸಿದ ಪ್ರಕಾರವಾಗಿ ರಾಜಮಾರ್ಗವಾಗಿ ಬರುತ್ತಾ ಕಂಸನ ಧನುರ್ಮಂದಿರಕ್ಕೆ ಹೋಗಿ ಅಲ್ಲಿ ರುದ್ರದೇವರಿಂದ ಕೊಡಲ್ಪಟ್ಟ ಕಂಸನ ಸೈನಿಕರಿಂದ ರಕ್ಷಿತವಾಗಿದ್ದ ರುದ್ರಧನುಸ್ಸನ್ನು ತೆಗೆದುಕೊಂಡು ಅದನ್ನು ಮುರಿದುಹಾಕಿ ಅದರಿಂದ ಕುಪಿತರಾಗಿ ಮೈಮೇಲೆ ಏರಿಬಂದ ಸೈನಿಕರನ್ನು ಸಂಹಾರಮಾಡಿ ಗೋಪಾಲಕರೊಡನೆ ಉಪವನಕ್ಕೆ ಬಂದು ಸಂತೋಷದಿಂದ ಕ್ಷೀರಾನ್ನವನ್ನು ಭುಂಜಿಸಿ ಅಂದು ರಾತ್ರಿ ಅಲ್ಲಿಯೇ ಕಳೆದು ಪ್ರಾತಃಕಾಲ ಎದ್ದು ಸ್ನಾನ ಸಂಧ್ಯಾದಿಗಳನ್ನು ಮುಗಿಸಿ ಕಂಸನು ನಡೆಸುವ ಮಲ್ಲ ಕ್ರೀಡೆಯನ್ನು ನೋಡಬಯಸಿ ಬಲರಾಮಾದಿಗಳಿಂದ ಪರಿವೃತನಾಗಿ ರಂಗದ್ವಾರಕ್ಕೆ ಬಂದನು. ಅಲ್ಲಿ ತನ್ನನ್ನು ಸಂಹರಿಸಲೋಸುಗ ಕಂಸನಿಂದ ನಿಲ್ಲಿಸಲ್ಪಟ್ಟಿದ್ದ ಕುವಲಯಾಪೀಡವೆಂಬ ಮಹಾಮತ್ತಗಜವನ್ನು ನೋಡಿ ಅದು ತನ್ನನ್ನು ಸಂಹರಿಸಲು ಬರುತ್ತಿರಲು ಅದನ್ನು ಚಾತುರ್ಯದಿಂದ ಸಂಹಾರಮಾಡಿ ರಂಗಸ್ಥಳವನ್ನು ಪ್ರವೇಶ ಮಾಡಿದನು. ಅಲ್ಲಿ ಚಾಣೂರ ಮತ್ತು ಮುಷ್ಟಿಕ ಎಂಬಿಬ್ಬರು ಉನ್ನತ್ತರಾದ ಮಲ್ಲರು (ಜಟ್ಟಿಗಳು) ಬಾಹುಯುದ್ಧಕ್ಕೆ ಶ್ರೀ ಕೃಷ್ಣ - ಬಲರಾಮರನ್ನು ಆಹ್ವಾನಮಾಡಲು, ಶ್ರೀ ಕೃಷ್ಣನು ಚಾಣೂರನೊಡನೆ ಬಾಹುಯುದ್ಧಮಾಡಿ ಅವನನ್ನು ಸಂಹರಿಸಿದನು. ಮತ್ತು ಬಲರಾಮನಿಂದ ಮುಷ್ಟಿಕನನ್ನು ಸಂಹಾರಮಾಡಿಸಿದನು. ಮತ್ತೆ ಕೆಲವರನ್ನು ಓಡಿ ಹೋಗುವಂತೆ ಮಾಡಿದನು. ಆ ತರುವಾಯ ಉನ್ನತವಾದ ಮಂಚದ ಮೇಲೆ ಕುಳಿತಿದ್ದ ಸೋದರಮಾವ

ಕಂಸನ ಜುಟ್ಟುಹಿಡಿದು ಎಳೆದು ಭೂಮಿಗೆ ಬೀಳಿಸಿ ಮುಷ್ಟಿ ಪ್ರಹಾರಗಳಿಂದ ಕಂಸನನ್ನು ಸಂಹಾರಮಾಡಿ ನಂತರ ಅವನ ಯಾವದ್ವಿಶಿಷ್ಟ ಸೈನ್ಯವನ್ನು ನಾಶಪಡಿಸಿ ನಿಗಡಬದ್ಧರಾಗಿದ್ದ ತಂದೆತಾಯಿಗಳಾದ ವಸುದೇವ ದೇವಕಿಯರನ್ನು ಬಂಧನದಿಂದ ಬಿಡಿಸಿ ಸರ್ವರನ್ನೂ ಸಂತೋಷಗೊಳಿಸಿ ಗರ್ಗಾಚಾರ್ಯರಿಂದ ಉಪನಯನ ಸಂಸ್ಕಾರಹೊಂದಿ ಲೋಕಶಿಕ್ಷಣಾರ್ಥವಾಗಿ ಅವಂತೀಪುರ ನಿವಾಸಿಗಳಾದ ಸಾಂದೀಪಿನಿ ಎಂಬ ಆಚಾರ್ಯರಲ್ಲಿಗೆ ಬಲರಾಮನೊಡನೆ ಹೋಗಿ ಅವರು ಒಮ್ಮೆ ಹೇಳುವ ಮಾತ್ರದಿಂದಲೇ ಎಲ್ಲವನ್ನೂ ಗ್ರಹಿಸುತ್ತಾ ಅತಿ ಶೀಘ್ರವಾಗಿ ಎಲ್ಲ ವಿದ್ಯೆಗಳನ್ನೂ ಕಲಿತು ಸರ್ವರನ್ನೂ ಆನಂದಗೊಳಿಸಿದನು. ಇಂತಹ ಶ್ರೀಕೃಷ್ಣನು ನಮ್ಮೆಲ್ಲರನ್ನೂ ಕಾಪಾಡಲಿ ಎಂದು ಭಾವ.

**ಅಲಂಕಾರ :-** ಇಲ್ಲಿ ''ವಿಷಾದನಾಲಂಕಾರಗಳ'' ಮಾಲೆ ಇದೆ. ತಾನೊಂದನ್ನು ಬಯಸಿ ಅದಕ್ಕಾಗಿ ಪ್ರಯತ್ನಿಸುವಾಗ ದುರ್ವಿಧಿಯಿಂದ ಅದಕ್ಕೆ ವಿರುದ್ಧ ಫಲ ದೊರಕಿತೆಂದು ವರ್ಣಿಸಿದರೆ ''ವಿಷಾದನಾಲಂಕಾರ''ವಾಗುತ್ತದೆ. ಇಲ್ಲಿ ಕಂಸನು ಶ್ರೀಕೃಷ್ಣ ಬಲರಾಮರನ್ನು ಸಂಹರಿಸಬೇಕೆಂದು ಬಯಸಿ ಶಿವಧನುಸ್ಸು, ಅದರ ರಕ್ಷಣೆಯ ಸೈನ್ಯ, ಕುವಲಯಾಪೀಡವೆಂಬ ಆನೆ ಮತ್ತು ಚಾಣೂರ ಮುಷ್ಟಿಕರೆಂಬ ಮಲ್ಲರು ಕೊನೆಗೆ ತಾನೂ ಪ್ರಯತ್ನಿಸಿ ಅದಕ್ಕೆ ವಿರುದ್ಧವಾದ ಅಪಜಯ ಹೊಂದಿ ತಾನೂ ನಾಶಹೊಂದಿದನೆಂದು ವರ್ಣಿಸಿರುವುದರಿಂದ 'ವಿಷಾದನಾಲಂಕಾರ'ವಿದೆ.

**ಲಕ್ಷಣ :-** 'ಇಷ್ಯಮಾಣವಿರುದ್ಧಾರ್ಥ ಸಂಪ್ರಾಪ್ತಿಸ್ತು ವಿಷಾದನಂ'

**ಉದಾ :-** ದೀಪಮುದ್ಯೋತಯೇದ್ಯಾವನ್ನಿರ್ವಾಣಸ್ತಾವದೇವಸಃ ।

ಇಲ್ಲಿ 'ಅಕೃತ' ಎಂಬ ಕ್ರಿಯಾಪದವಿದೆ. 'ಡುಕೃಞ ಕರಣೇ' ಎಂಬ ಧಾತುವಿನ ಸಕರ್ಮಕ ಕರ್ತರಿ ಲುಙ್ ಆತ್ಮನೇಪದಿ ಪ್ರಥಮಪುರುಷ ಏಕವಚನದಲ್ಲಿ 'ಅಕೃತ' ಎಂದಾಗಿದೆ.

| | | | |
|---|---|---|---|
| **ರೂಪ :-** | ಅಕೃತ | ಅಕೃಷಾತಾಂ | ಅಕೃಷತ |
| | ಅಕೃಥಾಃ | ಅಕೃಷಾತಾಂ | ಅಕೃಢ್ವಂ |
| | ಅಕೃಷಿ | ಅಕೃಷ್ವಹಿ | ಅಕೃಷ್ಮಹಿ |

**ದತ್ವಾ ಪುತ್ರಂ ಪ್ರವಕ್ತ್ರೇ ಪ್ರತಿಗತಮಧುರಸ್ಸಾಂತ್ವಯನ್ನುದ್ಧವಾಸ್ಯಾತ್-**
**ಗೋಷ್ಠಸ್ಥಾನ್ನಂದಪೂರ್ವಾನರಮಯದಬಲಾಂ ಪ್ರೀತಿಕೃದ್ಯಃ ಶುಭಸ್ಯ ।**
**ಅಕ್ರೂರಸ್ಯಾಥ ತೇನ ಪ್ರತಿವಿದಿತಪೃಥಾಪುತ್ರಕೃತ್ಯೋ ಜರಾಯಾಃ**
**ಸೂನೂಂ ನಿರ್ಭಿನ್ನಸೇನಂ ವ್ಯತನುತ ಬಹುಶೋ ವಿದ್ರುತಂ ನಃ ಸ ಪಾಯಾತ್ ॥ 12 ॥**

**ಅನ್ವಯಾರ್ಥ :-** ಯಃ = ಯಾವ ಕೃಷ್ಣನು, ಪ್ರವಕ್ತ್ರೇ = ವಿದ್ಯೋಪದೇಶಕರಾದ ಸಾಂದೀಪಿನ್ಯಾಚಾರ್ಯರಿಗೆ, ಪುತ್ರಂ = ಮಗನನ್ನು, ದತ್ವಾ = ತಂದುಕೊಟ್ಟು, ಪ್ರತಿಗತ ಮಧುರಃ, ಪ್ರತಿಗತ = ಪುನಃ ಸೇರಲ್ಪಟ್ಟ, ಮಧುರಃ = ಮಧುರಾ ಪಟ್ಟಣ ಉಳ್ಳವನಾಗಿ ಉದ್ಧವಾಸ್ಯಾತ್ = ಉದ್ಧವನ ಮುಖದಿಂದ, ಗೋಷ್ಠಸ್ಥಾನ್ = ಗೋಕುಲದಲ್ಲಿರತಕ್ಕ, ನಂದಪೂರ್ವಾನ್ = ನಂದಗೋಪನೇ ಮೊದಲಾದವರನ್ನು, ಸಾಂತ್ವಯನ್ = ಸಮಾಧಾನಪಡಿಸತಕ್ಕವನಾಗಿ, ಅಬಲಾಂ = ಸೈರಂಧ್ರಿಯನ್ನು, ಅರಮಯಶ್ = ಪ್ರೀತಿ ಪಡಿಸಿದನು. ಶುಭಸ್ಯ = ಸತ್ಕರ್ಮಯುಕ್ತನಾದ, ಅಕ್ರೂರಸ್ಯ = ಅಕ್ರೂರನಿಗೆ, ಪ್ರೀತಿ ಕೃತ್ = ಸಂತೋಷವನ್ನುಂಟುಮಾಡುವವನಾಗಿ, ಅಥ = ಅನಂತರದಲ್ಲಿ, ತೇನ = ಅಕ್ರೂರನಿಂದ, ಪ್ರತಿವಿದಿತಪೃಥಾಪುತ್ರಕೃತ್ಯಃ -

ಪ್ರತಿವಿದಿತ = ವಿಜ್ಞಾಪಿಸಲ್ಪಟ್ಟ, ಪೃಥಾ ಪುತ್ರ = ಕುಂತೀ ಪುತ್ರರಾದ ಪಾಂಡವರ, ಕೃತ್ಯಃ = ವ್ಯಾಪಾರಉಳ್ಳವನಾಗಿ, ಜರಾಯಾಃ = ಜರಾ ಎಂಬ ಸ್ತ್ರೀಯ, ಸೂನುಂ = ಮಗನನ್ನು, ನಿರ್ಭಿನ್ನಸೇನಂ - ನಿರ್ಭಿನ್ನ = ಭೇದಿಸಲ್ಪಟ್ಟ, ಸೇನಂ = ಸೇನೆಯುಳ್ಳವನನ್ನಾಗಿ, ಬಹುಶಃ = ಅನೇಕ ಬಾರಿ, ವಿದ್ರುತಂ = ಓಡಿದವನನ್ನಾಗಿ, ವ್ಯತನುತ = ಮಾಡಿದನು. ಸಃ = ಅಂತಹ ಮಹಿಮಾಶಾಲಿಯಾದ ಶ್ರೀಕೃಷ್ಣನು, ನಃ = ನಮ್ಮಗಳನ್ನು, ಪಾಯಾತ್ = (ಕಾಪಾಡಲಿ) ರಕ್ಷಣೆ ಮಾಡಲಿ.

**ವಿಗ್ರಹವಾಕ್ಯ :-** ಪ್ರಕರ್ಷೇಣ ವಕ್ತೀತಿ ಪ್ರವಕ್ತಾ ತಸ್ಮೈ ॥ ಪ್ರತಿಗತಾ ಮಧುರಾಯೇನಸಃ - ಪ್ರತಿಗತ ಮಧುರಃ । ಉದ್ಧವಸ್ಯ ಆಸ್ಯಂ - ಉದ್ಧವಾಸ್ಯಂ, ತಸ್ಮಾತ್ ಉದ್ಧವಾಸ್ಯಾತ್ । ಗೋಷ್ಠೇ ತಿಷ್ಠಂತೀತಿ - ಗೋಷ್ಠಸ್ಥಾಃ । ತಾನ್ - ಗೋಷ್ಠ-ಸ್ಥಾನ್ । ನಂದಃ ಪೂರ್ವಃ ಯೇಷಾಂತೇ ತಾನ್ ನಂದಪೂರ್ವಾನ್ । ಪ್ರೀತಿಂ ಕರೋತೀತಿ - ಪ್ರೀತಿಕೃತ್ । ಪೃಥಾಯಾಃ ಪುತ್ರಾಃ = ಪೃಥಾಪುತ್ರಾಃ, ಪೃಥಾಪುತ್ರಾಣಾಂ ಕೃತ್ಯಾನಿ - ಪೃಥಾಪುತ್ರಕೃತ್ಯಾನಿ, ಪ್ರತಿವಿದಿತಾನಿ ಪೃಥಾಪುತ್ರಕೃತ್ಯಾನಿ ಯೇನಸಃ, ಪ್ರತಿವಿದಿತಪೃಥಾಪುತ್ರಕೃತ್ಯಃ । ನಿರ್ಭಿನ್ನಾ ಸೇನಾ ಯಸ್ಯ ಸಃ - ನಿರ್ಭಿನ್ನಸೇನಃ, ತಂ ನಿರ್ಭಿನ್ನಸೇನಂ.

**ತಾತ್ಪರ್ಯ :-** ಹಿಂದೆ ಹೇಳಿದಂತೆ ಅಣ್ಣ ಬಲರಾಮನೊಡನೆ ಸಾಂದೀಪಿನ್ಯಾ ಚಾರ್ಯರಲ್ಲಿ ಸಕಲ ವಿದ್ಯೆಗಳನ್ನೂ ಹೊಂದಿ ಊರಿಗೆ ಮರಳುವಾಗ ಸಾಂಪ್ರದಾಯಿಕವಾಗಿ ಗುರುಗಳಿಗೆ ಸಂಭಾವನೆ ಕೊಡಬೇಕಾದ ಸಂದರ್ಭದಲ್ಲಿ ''ಗುರುದೇವ! ನನ್ನಿಂದ ಏನು ಅಪೇಕ್ಷಿಸುತ್ತೀರಿ? ದಯಮಾಡಿ ಹೇಳಬೇಕು'' ಎಂದು ಶ್ರೀಕೃಷ್ಣನು ಕೇಳಿದನು. ಸಾಂದೀಪಿನ್ಯಾಚಾರ್ಯರಿಗೆ ಶ್ರೀಕೃಷ್ಣನ ಮಹಿಮೆ ಸಾಮರ್ಥ್ಯಗಳು ತಿಳಿದುದರಿಂದ ಅವರು ''ಕೃಷ್ಣ ! ಪ್ರಭಾಸ ಕ್ಷೇತ್ರದಲ್ಲಿ ಸಮುದ್ರಸ್ನಾನಕಾಲದಲ್ಲಿ ಮುಳುಗಿ ಮೃತನಾದ ನನ್ನ ಮಗನನ್ನು ಕರೆತಂದು ನನಗೆ ಒಪ್ಪಿಸು. ಅದೇ ನೀನು ನನಗೆ ಕೊಡಬೇಕಾದ ಗುರುದಕ್ಷಿಣೆ.'' ಎಂದರು. ಗುರುಗಳ ಅಪ್ಪಣೆಯಂತೆ ಶ್ರೀಕೃಷ್ಣನು ರಥದಲ್ಲಿ ಕುಳಿತು, ಪ್ರಭಾಸಕ್ಷೇತ್ರಕ್ಕೆ ಬಂದು ಅಲ್ಲಿ ವರುಣದೇವರ ವಾಕ್ಯದಂತೆ ಸಮುದ್ರ ಮಧ್ಯದಲ್ಲಿದ್ದ ಶಂಖರೂಪದಲ್ಲಿದ್ದ ಪಂಚಜನ ಎಂಬ ದೈತ್ಯನನ್ನು ಸಂಹಾರಮಾಡಿ ಅವನ ಉದರದಲ್ಲಿ ಗುರುಪುತ್ರನಿಲ್ಲದಿರುವುದನ್ನು ಕಂಡು ಪಂಚಜನ ಶರೀರಜನ್ಯವಾದ ಪಾಂಚಜನ್ಯ ಎಂಬ ಶಂಖವನ್ನು ತೆಗೆದುಕೊಂಡು ಅಲ್ಲಿಂದ ಯಮಪುರಿಗೆ ತೆರಳಿ ಅಲ್ಲಿ ಯಮನು ತಂದು ಒಪ್ಪಿಸಿದ ಗುರುಪುತ್ರನನ್ನು ಕರೆತಂದು, ಗುರು ಸಾಂದೀಪಿ-ನ್ಯಾಚಾರ್ಯರಿಗೆ ಸಮರ್ಪಿಸಿ ಅವರ ಆಶೀರ್ವಾದ ಪಡೆದು ಬೀಳ್ಕೊಂಡು ಹೊರಟು ಮಧುರೆಗೆ ಬಂದನು.

ಮಧುರೆಯಲ್ಲಿ ಕೃಷ್ಣನು ಯದುಕುಲ ಶ್ರೇಷ್ಠನಾದ ಉದ್ಧವನನ್ನು ತನ್ನ ವಿರಹದಿಂದ ದುಃಖಿತರಾದ ಗೋಕುಲ-ವಾಸಿಗಳಾದ ಸಕಲ ಸಜ್ಜನರನ್ನು ತನ್ನ ಶುಭಸಂದೇಶಗಳಿಂಧ ಸಂತೋಷಪಡಿಸಿ ಬರಲು ಕಳಿಸಿದನು. ತರುವಾಯ ಹಿಂದ ಕಂಸವಧೆಗೆ ಮೊದಲು ತ್ರಿವಕ್ರೆಗೆ ಅಭಯ ಕೊಟ್ಟಿದ್ದಂತೆ ಕಾಮತಪ್ತಳಾದ ಸೈರಂಧ್ರಿಯ ಮನೆಗೆ ಅವಳ ಪ್ರಾರ್ಥನೆಯಂತೆ ಹೋಗಿ ಅವಳೊಡನೆ ಕ್ರೀಡಿಸಿ ಅವಳ ಮನೋರಥವನ್ನು ಪೂರ್ಣಮಾಡಿದನು. ಅನಂತರ ಅಕ್ರೂರನ ಮನೆಗೆ ಹೋಗಿ ಅಲ್ಲಿ ಅವನು ಮಾಡಿದ ಪೂಜೆಯನ್ನು ಸ್ವೀಕರಿಸಿ, ಪಿತೃವಿಹೀನರಾಗಿ ಮುನಿಗಳಿಂದ ಹಸ್ತಿನಾಪುರಕ್ಕೆ ಕರೆತರಲ್ಪಟ್ಟ, ಕೌರವರ ಹಿಂಸೆಯಿಂದ ದುಃಖಿತರಾಗಿದ್ದ ಪಾಂಡವರ ವಿಚಾರವನ್ನು ತಿಳಿದುಬರಲು ಅಕ್ರೂರನನ್ನು ಹಸ್ತಿನಾಪುರಕ್ಕೆ ಕಳುಹಿಸಿ ಕೆಲದಿನಗಳ ಮೇಲೆ ಅಕ್ರೂರನು ಹಸ್ತಿನಾವತಿಯಿಂದ ಬಂದು ಹೇಳಿದ ಪಾಂಡವರ ಎಲ್ಲ ವಿಚಾರಗಳನ್ನೂ ತಿಳಿದುಕೊಂಡನು.

ಇದೇ ಸಂದರ್ಭದಲ್ಲಿ ಕಂಸನನ್ನು ಸಂಹರಿಸಿದ್ದರಿಂದ ಮಗಳು ವಿಧವೆಯಾದಳಲ್ಲಾ ಎಂಬ ಕೋಪದಿಂದ ಜರಾಸಂಧನು ಕೃಷ್ಣನನ್ನು ಸಂಹರಿಸಬೇಕೆಂದು ದೃಢಪ್ರತಿಜ್ಞನಾಗಿ 23 ಅಕ್ಷೋಹಿಣೀ ಸೈನ್ಯದೊಡನೆ ಯುದ್ಧಕ್ಕಾಗಿ ಬರಲು ಅವನ 23 ಅಕ್ಷೋಹಿಣೀ ಸೈನ್ಯವನ್ನು ಸಂಹಾರಮಾಡಿ, ಬ್ರಹ್ಮದೇವರು, ರುದ್ರದೇವರು, ದೂರ್ವಾಸಾದಿಗಳು ನೀಡಿದ ವರದಿಂದ ಅಜೇಯನಾಗಿದ್ದ ಜರಾಸಂಧನನ್ನು ಅನೇಕಬಾರಿ ಯುದ್ಧದಲ್ಲಿ ಸೋಲಿಸಿ ಅವನು ಪಲಾಯನವಾಗುವಂತೆ ಮಾಡಿ

ಶ್ರೀಕೃಷ್ಣನು ಸರ್ವರನ್ನೂ ಸಂತೋಷ ಪಡಿಸಿದನು. ಇಂತಹ ಮಹಿಮೋಪೇತನಾದ ಶ್ರೀಕೃಷ್ಣನು ನಮ್ಮೆಲ್ಲರನ್ನೂ ರಕ್ಷಿಸಲಿ ಎಂದು ಭಾವ.

**ಅಲಂಕಾರಗಳು :-** ಇಲ್ಲಿ ಹಿಂದಿನಂತೆ ಶ್ರೀಕೃಷ್ಣನ ಚರಿತ್ರೆಯನ್ನು ಉತ್ತರೋತ್ತರ ಉತ್ಕರ್ಷದಿಂದ ವರ್ಣಿಸಿರು-ವುದರಿಂದ 'ಸಾರಾಲಂಕಾರ' ಇದೆ. ಅಲ್ಲದೇ ''ವಿಶೇಷಾಲಂಕಾರ''ವೂ ಇದೆ. ಶ್ರೀಕೃಷ್ಣನು ಗುರುದಕ್ಷಿಣೆಯನ್ನು ಕೊಡಲು ಪ್ರಯತ್ನಿಸಿ ಯಾರಿಂದಲೂ ಅಸಾಧ್ಯವಾದ ಪಂಚಜನನನ್ನು ಕೊಂದು ಅಲ್ಲಿಂದ ಯಮಪುರಿಗೆ ಹೋಗಿ ಅಲ್ಲಿದ್ದ ಗುರುಪುತ್ರನನ್ನು ಕರೆತಂದು ಅರ್ಪಿಸಿದನೆಂದು ವರ್ಣಿಸಿರುವುದರಿಂದ ''ವಿಶೇಷಾಲಂಕಾರ'' ಇದೆ.

**ಲಕ್ಷಣ :-** ''ಕಿಂಚಿದಾರಂಭತೋಽ ಶಕ್ಯವಸ್ತ್ವಂತರಕೃತಿಶ್ಚಸಃ ।''

**ಉದಾ :-** ''ತ್ವಾಂ ಪಶ್ಯತಾಮಯಾಲಬ್ಧಂ ಕಲ್ಪವೃಕ್ಷ ನಿರೀಕ್ಷಣಂ''

ಇಲ್ಲಿ 'ಪಾಯಾತ್' ಎಂಬುದು ಕ್ರಿಯಾಪದ. ಇದು ''ಪಾರಕ್ಷಣೆ'' ಎಂಬ ಧಾತುವಿನ ಸಕರ್ಮಕಕರ್ತರಿ ಆಶೀರ್ಲಿಙ್ ಪರಸ್ಮೈಪದಿ ಪ್ರಥಮಪುರುಷ ಏಕವಚನದ ರೂಪ.

| | | | | |
|---|---|---|---|---|
| **ರೂಪ :-** | ಪಾಯಾತ್ | ಪಾಯಾಸ್ತಾಂ | ಪಾಯಾಸುಃ | |
| | ಪಾಯಾಃ | ಪಾಯಾಸ್ತಂ | ಪಾಯಾಸ್ತ | |
| | ಪಾಯಾಸಂ | ಪಾಯಾಸ್ವ | ಪಾಯಾಸ್ಮ | ॥ 12 ॥ |

**ಪುರ್ಯಾ ನಿರ್ಗತ್ಯ ರಾಮಾದಥ ಸಹಮುಸಲೀ ಪ್ರಾಪ್ಯ ಕೃಷ್ಣೋಽಭ್ಯನುಜ್ಞಾಂ**
**ಗೋಮಂತಂ ಚಾಪಿ ಮೌಲಿಂ ಖಗಪತಿವಿಹಿತಂ ವಾಸುದೇವಂ ಶೃಗಾಲಮ್ ।**
**ಹತ್ವಾ ಶತ್ರುಂ ಚ ಪುರ್ಯಾಮಧಿಜಲಧಿಪುರೀಂ ನಿರ್ಮಿತಾಂ ಬಂಧುವರ್ಗಾನ್**
**ನಿನ್ಯೇ ಯಸ್ಸೋಽವತಾನ್ನಃ ಪ್ರಮಥಿತಯವನೋ ಮೌಚುಕುಂದಾಕ್ಷಿವಹ್ನೇಃ ॥ 13 ॥**

**ಅನ್ವಯಾರ್ಥ :-** ಯಃ = ಯಾವ ಶ್ರೀಕೃಷ್ಣನು, ಸಹಮುಸಲೀ = ಬಲರಾಮನಿಂದ ಸಹಿತನಾಗಿ, ಅಥ = ಆನಂತರದಲ್ಲಿ, ಪುರ್ಯಾಃ = ಮಧುರಾಪಟ್ಟಣದಿಂದ, ನಿರ್ಗತ್ಯ = ಹೊರಹೊರಟು, ರಾಮಾತ್ = ಶ್ರೀ ಪರಶುರಾಮ ದೇವರಿಂದ, ಅಭ್ಯನುಜ್ಞಾಂ = ಅಪ್ಪಣೆಯನ್ನು, ಪ್ರಾಪ್ಯ = ಪಡೆದು, ಗೋಮಂತಂಚ = ಗೋಮಂತನಾಮಕ ಪರ್ವತವನ್ನು ಸಹ, ಪ್ರಾಪ್ಯ = ಹೊಂದಿ, ಖಗಪತಿವಿಹಿತಂ = ಗರುಡನಿಂದ ಅರ್ಪಿಸಲ್ಪಟ್ಟ, ಮೌಲಿಮಪಿ = ಕಿರೀಟವನ್ನು ಕೂಡ, ಪ್ರಾಪ್ಯ = ಪಡೆದು, ಶೃಗಾಲಂ ವಾಸುದೇವಂ = ಶೃಗಾಲವಾಸುದೇವನೆಂಬ, ಶತ್ರುಂ = ವೈರಿಯನ್ನು, ಪುರ್ಯಾಂ = ಕರವೀರಪುರದಲ್ಲಿ, ಹತ್ವಾ = ಸಂಹರಿಸಿ, ಆಧಿಜಲಧಿ = ಸಮುದ್ರದಲ್ಲಿ, ನಿರ್ಮಿತಾಂ = ನಿರ್ಮಿಸಲ್ಪಟ್ಟ, ಪುರೀಂ = ದ್ವಾರಕೆ ಎಂಬ ಪಟ್ಟಣಕ್ಕೆ, ಬಂಧುವರ್ಗಾನ್ = ಬಂಧುಗಳಾದ ಯಾದವ ಸಮೂಹವನ್ನು, ನಿನ್ಯೇ = ಕರೆದೊಯ್ದನು. ಮೌಚುಕುಂದಾಕ್ಷಿವಹ್ನೇಃ - ಮೌಚುಕುಂದ = ಮುಚುಕುಂದರಾಜ ಸಂಬಂಧಿಯಾದ, ಅಕ್ಷಿ = ಕಣ್ಣುಗಳಿಂದ ಉತ್ಪನ್ನವಾದ, ವಹ್ನೇಃ = ಬೆಂಕಿಯಿಂದ, ಪ್ರಮಥಿತಯವನಃ - ಪ್ರಮಥಿತ = ಸಂಹಾರ ಮಾಡಲ್ಪಟ್ಟ, ಯವನಃ = ಕಾಲಯವನನುಳ್ಳ ಸಃ = ಶ್ರೀ ಕೃಷ್ಣನು, ನಃ - ನಮ್ಮನ್ನು, ಅವತಾತ್ - ರಕ್ಷಿಸಲಿ.

**ವಿಗ್ರಹವಾಕ್ಯ :-** ಮುಸಲಿನಾ ಸಹ ವರ್ತತ ಇತಿ ಸಹಮುಸಲೀ । ಖೇ ಗಚ್ಛಂತೀತಿ ಖಗಾಃ. ಖಗಾನಂ ಪತಿಃ ಖಗಪತಿಃ ತೇನ ವಿಹಿತಃ ಖಗಪತಿವಿಹಿತಃ, ತಮ್ । ವಸುದೇವಸ್ಯ ಅಪತ್ಯಂ ಪುಮಾನ್ ವಾಸುದೇವಃ, ತಮ್ । ಜಲಧೌ ಇತಿ ಅಧಿಜಲಧಿ । ಬಂಧೂನಾಂ ವರ್ಗಾಃ ಬಂಧುವರ್ಗಾಃ ತಾನ್ । ಪ್ರಮಥಿತಃ ಯವನಃ ಯೇನಸಃ । ಮುಚು ಕುಂದಸ್ಯ ಇಮೇ ಮೌಚುಕುಂದೇ, ತೇ ಚ ತೇ ಅಕ್ಷಿಣೀ ಚ ಮೌಚುಕುಂದಾಕ್ಷಿಣೀ, ತಯೋಃ ವನ್ಹಿಃ ಮೌಚಕುಂದಾಕ್ಷಿವನ್ಹಿಃ, ತಸ್ಮಾತ್ ॥

**ತಾತ್ಪರ್ಯ :-** ಶ್ರೀಲಕ್ಷ್ಮೀನಾರಾಯಣಾಚಾರ್ಯರು ಶ್ರೀ ಗುರುರಾಜರ ಈ ಪದ್ಯದಲ್ಲಿ ಅಡಗಿರುವ ವಿಸ್ತಾರವಾದ ಕಥಾಭಾಗವನ್ನು ''ಅನೇನ'' ಎಂಬುದಾಗಿ ಪ್ರಾರಂಭಿಸಿ ನಿಪುಣತರವಾಗಿ ತಮ್ಮ ವ್ಯಾಖ್ಯಾನದಲ್ಲಿ ವಿವರಿಸಿದ್ದಾರೆ.

ಬಲರಾಮನಿಂದ ಸಹಿತನಾದ ಶ್ರೀ ಕೃಷ್ಣನು ಹಿಂದೆ ಹೇಳಿದಂತೆ ಅನೇಕ ಸಲ ಜರಾಸಂಧನನ್ನು ಓಡಿಸಿ, ಬಲವ-ದ್ವಿರೋಧವಿದ್ದಲ್ಲಿ ಅಲ್ಪ ಬಲವಿದ್ದವರು ಇರಬಾರದೆಂಬ ಲೋಕನೀತಿಯನ್ನು ಪ್ರಕಟಿಸಲು ತಾನಾಗಿಯೇ ಮಧುರೆಯಿಂದ ಹೊರಟು ಮಾರ್ಗ ಮಧ್ಯದಲ್ಲಿ ಒಂದು ವೃಕ್ಷಮೂಲದಲ್ಲಿ ವಾಸಮಾಡಿದ್ದ ಶ್ರೀ ಪರಶುರಾಮದೇವರನ್ನು ಕಂಡು ಅವರೊಡನೆ ಕುಶಲ ಪ್ರಶ್ನಾದಿಗಳನ್ನು ಮಾಡಿ ಅವರಿಂದ ಅಪ್ಪಣೆ ಪಡೆದು ಹೊರಟು ಗೋಮಂತಕ ಪರ್ವತದ ಕೆಳಭಾಗದಲ್ಲಿರುವ ಕರವೀರಪುರಕ್ಕೆ ಬಂದನು. ಕರವೀರಪುರಾಧೀಶನ ದನುಸ್ವರೂಪಳಾದ ಪುತ್ರಿಯಲ್ಲಿ ವಸುದೇವನಿಂದ ''ಪುತ್ರಿಕಾ ಪುತ್ರ'' ನ್ಯಾಯದಿಂದ ಜನಿಸಿದ್ದ ಹಿಂದೆ ಮಧುನಾಮಕ ದೈತ್ಯನಿಗೆ ಧುಂಧು ಎಂಬ ಹೆಸರಿನ ಮಗನಾಗಿ ಹುಟ್ಟಿದ್ದ, ಈಗ ತನ್ನ ಶತ್ರುವಾದ ಶೃಗಾಲ ವಾಸುದೇವನನ್ನು ಕರವೀರಪುರದಲ್ಲಿ ಸಂಹರಿಸಿ, ಗೋಮಂತಕಕ್ಕೆ ಬಂದು ಅಲ್ಲಿರುವ ಅತ್ಯುನ್ನತವಾದ ''ಪ್ರಹರ್ಷಣ'' ವೆಂಬ ಶೃಂಗಕ್ಕೆ ಹೋಗಿ ಅತಿ ಸಂತೋಷದಿಂದ ಬಲರಾಮನೊಡನೆ ಕೃಷ್ಣನು ರಮಿಸುತ್ತಿದ್ದನು. ಹಿಂದೆ ಕ್ಷೀರಸಮುದ್ರದಲ್ಲಿ ಮುಕ್ತಸ್ಥಾನದಿಂದ ಅಮುಕ್ತ ಸ್ಥಾನಕ್ಕೆ ಬಂದು ಅಲ್ಲಿ ಸೃಷ್ಟಿಗೆ ಬಂದಿರುವ ಸುರಗಣದಿಂದ ಸೇವ್ಯಮಾನನಾಗಿ ಪವಡಿಸಿದ್ದ ಶ್ರೀ ನಾರಾಯಣನ ದರ್ಶನಾಕಾಂಕ್ಷಿಯಾಗಿ ಬಂದ ವಿರೋಚನ ಸುತನಾದ ಬಲಿಚಕ್ರವರ್ತಿಯು ನಾರಾಯಣನ ಶಿರಸ್ಸಿನಲ್ಲಿದ್ದ ಕಿರೀಟವನ್ನು ಅಪಹರಿಸಿಕೊಂಡು ಹೋಗುತ್ತಿರಲು, ಬಲಿಯಲ್ಲಿರುವ ದೈತ್ಯಾವೇಶ ಪ್ರಕಟನೆಗಾಗಿ ದೇವತೆ-ಗಳೊಡನೆ ನಿದ್ರಿಸುತ್ತಿರುವಂತೆ ನಟಿಸುತ್ತಿದ್ದ ನಾರಾಯಣನು ಬಲಿಯ ವ್ಯಾಪಾರವನ್ನು ಕಂಡರೂ ಉದಾಸೀನನಾಗಿರಲು, ಪುರಪಾಲಕನಾದ ಗರುಡನು ಬಲಿಯನ್ನು ಜಯಿಸಿ ಶ್ರೀಮನ್ನಾರಾಯಣನ ಕಿರೀಟವನ್ನು ರಕ್ಷಿಸಿದ್ದನು. ಅದನ್ನು ಗೋಮಂ-ತಕದಲ್ಲಿರುವ ನಾರಾಯಣಾಭಿನ್ನನಾದ ಶ್ರೀ ಕೃಷ್ಣನಲ್ಲಿಗೆ ತಂದರ್ಪಿಸಿ ಗರುಡನು ನಮಸ್ಕರಿಸಲು ಕೃಷ್ಣನು ಕಿರೀಟವನ್ನು ಧರಿಸಿ ಗರುಡನನ್ನು ಕಳುಹಿಸಿಕೊಟ್ಟು ಗೋಮಂತಕದಿಂದ ಕೆಳಗಿಳಿದು ಕರವೀರಪುರಕ್ಕೆ ಬಂದು ಅಲ್ಲಿ ನಾಲ್ಕು ತಿಂಗಳವರೆಗೆ ವಾಸಿಸುತ್ತಿದ್ದು ಅಲ್ಲಿಂದ ಮತ್ತೆ ಮಧುರೆಗೆ ಬಂದನು.

ಶೃಗಾಲ ವಾಸುದೇವನನ್ನು ಸಂಹರಿಸಿದ್ದರಿಂದ ಕುಪಿತನಾದ ಜರಾಸಂಧನು ಅಗಾಧ ಸೇನೆಯೊಡನೆ ಯುದ್ಧಕ್ಕಾಗಿ ಮಧುರೆಗೆ ಬರಲು ಕೃಷ್ಣನು ಮತ್ತೊಮ್ಮೆ ಯುದ್ಧದಲ್ಲಿ ಜರಾಸಂಧನನ್ನು ಸೋಲಿಸಿ ಓಡಿಸಿದನು. ಇದರಿಂದ ಖತಿಗೊಂಡ ಜರಾಸಂಧನು ಕೃಷ್ಣನ ಮೇಲೆ ಸೇಡು ತೀರಿಸಿಕೊಳ್ಳಲು ಮತ್ತೆ ಯುದ್ಧಸನ್ನದ್ಧನಾಗಿ ಹೊರಟು ತನ್ನ ಸಹಾಯಕ್ಕೆ ಬರಬೇಕೆಂದು ಬಹು ಭಯಂಕರನೂ, ಕ್ರೂರಿಯೂ ಆದ ಕಾಲಯವನನಿಗೆ ಹೇಳಿ ಕಳುಹಿಸಿದನು. ಮೂರು ಕೋಟಿ ಯವನ ಸೈನ್ಯದೊಡನೆ ಕಾಲಯವನನು ಜರಾಸಂಧನಿಗೆ ಸಹಾಯಾರ್ಥವಾಗಿ ಮಧುರೆಯನ್ನು ಮುತ್ತಲು ಹೊರಟು ಬಂದನು. ಇದನ್ನು ಅರಿತ ಶ್ರೀಕೃಷ್ಣನು ಜರಾಸಂಧನೂ ಬರುತ್ತಿರುವನೆಂಬುದನ್ನು ನಿಶ್ಚಯಿಸಿ ತನ್ನವರಾದ ಯಾದವರನ್ನು ಈ ಅಸಾಧ್ಯ ಧಾಳಿಯಿಂದ ರಕ್ಷಿಸಲು ಸಮುದ್ರದಲ್ಲಿ ದ್ವಾದಶಯೋಜನ ವಿಸ್ತೀರ್ಣವಾದ, ಸುಭದ್ರವಾದ, ಅತಿ ಮನೋಹರವಾದ ದ್ವಾರಕಾ ಎಂಬ ಪಟ್ಟಣವನ್ನು ನಿರ್ಮಿಸಿ ಅಲ್ಲಿಗೆ ಸಮಸ್ತ ಯಾದವರನ್ನೂ ಬಲರಾಮನೊಡನೆ ಕಳುಹಿಸಿ, ಮಧುರೆಯಿಂದ ಹೊರಟು

ಕಾಲಯವನನು ಬೀಡುಬಿಟ್ಟಿದ್ದ ಸ್ಥಳಕ್ಕೆ ನಿರಾಯುಧನಾಗಿ ಬಂದು ತನ್ನನ್ನು ಕಂಡ ಕಾಲಯವನನು ಮೇಲೇರಿ ಬರಲು ಭೀತನಾದವನಂತೆ ಓಡಲಾರಂಭಿಸಿದನು. ಕಾಲಯವನನು ಯುದ್ಧಾಹ್ವಾನ ಮಾಡುತ್ತಾ ಕೃಷ್ಣನನ್ನು ಬೆನ್ನಟ್ಟಿದನು. ಹೀಗೆ ಕೆಲದೂರ ಓಡಿ ಶ್ರೀಕೃಷ್ಣನು ದೂರದಲ್ಲಿ ಪರ್ವತದ ತಪ್ಪಲಿನಲ್ಲಿದ್ದ ಗುಹೆಯನ್ನು ಪ್ರವೇಶಿಸಿದನು. ಕಾಲಯವನನೂ ಕೃಷ್ಣನನ್ನು ಬೆನ್ನಟ್ಟಿ ಗುಹೆಗೆ ಬಂದನು. ಆ ಗುಹೆಯಲ್ಲಿ ಮುಚುಕುಂದ ಮಹಾರಾಜನು ಮಲಗಿ ನಿದ್ರಿಸುತ್ತಿದ್ದನು. ಹಿಂದೆ ದೇವಾಸುರ ಯುದ್ಧಕಾಲದಲ್ಲಿ ದೇವತೆಗಳ ಪಕ್ಷವಹಿಸಿ ಮುಚುಕುಂದ ಮಹಾರಾಜನು ಸಮಸ್ತ ದೈತ್ಯರನ್ನೂ ಜಯಿಸಿದ್ದನು. ಅವನ ಉಪಕಾರದಿಂದ ಸಂತೋಷಗೊಂಡ ದೇವತೆಗಳು ಬಹುಕಾಲ ನಿದ್ರಿಸುವ - ನಿದ್ರಾಭಂಗಮಾಡಿದವರನ್ನು ನೇತ್ರಾಗ್ನಿಯಿಂದ ನಾಶಪಡಿಸುವ ವರವನ್ನಿತ್ತಿದ್ದರು. ಯುದ್ಧದಿಂದ ಬಳಲಿದ್ದ ಮುಚುಕುಂದನು ಬಹುಕಾಲ ನಿದ್ರಿಸಲು ನಿಶ್ಚಯಿಸಿ ಈ ಗುಹೆಯಲ್ಲಿ ಮಲಗಿ ದೇವತೆಗಳ ವರಪ್ರಭಾವದಿಂದ ನಿದ್ರಾಸಕ್ತನಾಗಿದ್ದನು. ದೇವತೆಗಳು ವರಪ್ರದಾನ ಮಾಡಿದ ಮೇಲೆ ನೇತ್ರಾಗ್ನಿಯಿಂದ ಸಮಸ್ತವನ್ನೂ ನಾಶಪಡಿಸುವ ವರದಿಂದ ಅನರ್ಥವಾಗದಂತೆ ಮಾಡಬೇಕೆಂದು ಪ್ರಾರ್ಥಿಸಿದ್ದಂತೆ ಶ್ರೀಕೃಷ್ಣನು ದೇವತೆಗಳ ವರವನ್ನು ಕಾಲಯವನನ ನಾಶರೂಪ ಲೋಕಕಲ್ಯಾಣಕ್ಕಾಗಿ ಉಪಯೋಗಿಸಲು ಓಡಿಬಂದವನಂತೆ ತಂತ್ರಹೂಡಿ ಗುಹೆಗೆ ಬಂದು ಮರೆಯಾಗಿ ನಿಂತನು. ಕೃಷ್ಣನನ್ನು ಬೆನ್ನಟ್ಟಿ ಬಂದ ಕಾಲಯವನನು ಗುಹೆಯಲ್ಲಿ ಕೃಷ್ಣನು ಕಾಣದಂತಾಗಲು ಮುಸುಕಿಟ್ಟು ಮಲಗಿದ್ದ ಮುಚುಕುಂದನೇ ಕೃಷ್ಣನೆಂದು ಭ್ರಮಿಸಿ ಕ್ರೋಧದಿಂದ ಮುಸುಕು ಹಿಡಿದೆಳೆದನು. ನಿದ್ರಾಭಂಗವಾಗಿ ಎಚ್ಚೆತ್ತ ಮುಚುಕುಂದರಾಜನು ತನ್ನ ನಿದ್ರಾಭಂಗ ಮಾಡಿದವರ್ಯಾರೆಂದು ಕೋಪದಿಂದ ಸುತ್ತಲೂ ನೋಡುವಾಗ ಅವನ ದೃಷ್ಟಿ ಕಾಲಯವನನ ಮೇಲೆ ಬಿದ್ದಿತು. ಕೂಡಲೆ ಕೃಷ್ಣನು ಮುಚುಕುಂದರಾಜನ ಕಣ್ಣಿನಿಂದ ಹೊರಹೊರಟು ಅಗ್ನಿಸ್ವರೂಪ ತಾಳಿ ಕಾಲಯವನನನ್ನು ಭಸ್ಮಮಾಡಿ ಮುಚುಕುಂದರಾಜನಿಗೆ ಮೋಕ್ಷವನ್ನು ಕರುಣಿಸಿದನು ಎಂಬ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುತ್ತದೆ. ಹೀಗೆ ಕಾಲಯವನನ ಸಂಹಾರದಿಂದ ಸರ್ವರನ್ನೂ ಸಂತೋಷಗೊಳಿಸಿದ ಶ್ರೀಕೃಷ್ಣನು ನಮ್ಮನ್ನು ರಕ್ಷಿಸಲಿ ಎಂದು ಭಾವ.

**ಅಲಂಕಾರಗಳು :** ಇಲ್ಲಿ ಕಾಲಯವನನು ಶ್ರೀಕೃಷ್ಣನನ್ನು ಕೊಲ್ಲುವುದಕ್ಕಾಗಿ ಗುಹೆಯನ್ನು ಪ್ರವೇಶಿಸಿ ಅಲ್ಲಿ ಮಲಗಿದ್ದ ಮುಚುಕುಂದನ ನಿದ್ರಾಭಂಗದಿಂದುಂಟಾದ ಕೋಪಯುಕ್ತ ನೇತ್ರಾಗ್ನಿಯಿಂದ ಸಂಹೃತನಾದನೆಂದು ವರ್ಣಿಸಿರುವುದರಿಂದ ''ವಿಷಮಾಲಂಕಾರ''ವೂ ಇದರಂತೆ ''ಅಸಂಭವ - ಸಾರ - ಕಾವ್ಯಲಿಂಗಾದಿ'' ಅಲಂಕಾರಗಳೂ ಇವೆ.

ಇಲ್ಲಿ ''ನಿನ್ಯೇ'' ಎಂಬ ಕ್ರಿಯಾಪದವಿದೆ. ಇದು ''ಣೀಞ್-ಪ್ರಾಪಣೇ'' ಎಂಬ ಧಾತುವಿನ ಸಕರ್ಮಕಕರ್ತರಿ ಲಿಟ್ ಆತ್ಮನೇಪದಿ ಪ್ರಥಮ ಪುರುಷ ಏಕವಚನದ ರೂಪ.

| | | | | |
|---|---|---|---|---|
| **ರೂಪ :-** | ನಿನ್ಯೇ | ನಿನ್ಯಾತೇ | ನಿನ್ಯಿರೇ | |
| | ನಿನ್ಯಿಷೇ | ನಿನ್ಯಾಥೇ | ನಿನ್ಯಿಧ್ವೇ । | |
| | ನಿನ್ಯೇ | ನಿನ್ಯಿವಹೇ | ನಿನ್ಯಿಮಹೇ | ॥ 13 ॥ |

**ರಾಜ್ಞಾ ಸಂಸ್ತೂಯಮಾನೋ ಹತಯವನಬಲೋ ಭೀತವನ್ಮಾಗಧೇಶಾ-**
**ದ್ಗೋಮಂತಂ ಪ್ರಾಪ್ಯ ಭೂಯೋ ಜಿತಮಗಧಪತಿರ್ಜಾತಶಾಂತಾಗ್ನಿಶೈಲಃ ।**
**ಆಗತ್ಯ ದ್ವಾರಕಾಂ ಯೋ ಹೃದಿಕಸುತಗಿರಾ ಜ್ಞಾತಕೌಂತೇಯಕೃತ್ಯಃ**
**ಪಶ್ಚಾತ್ಸ್ವಾದಾಯ ಭೈಷ್ಮೀಂ ನೃಷು ಯುಧಿ ಜಿತವಾನ್ ಭೂಭೃತಃ ಪ್ರೀಯತಾಂ ನಃ ॥ 14 ॥**

**ಅನ್ವಯಾರ್ಥ :-** ಯಃ = ಯಾವ ಕೃಷ್ಣನು, ರಾಜ್ಞಾ – ಮುಚುಕುಂದ ರಾಜನಿಂದ, ಸಂಸ್ತೂಯಮಾನಃ = ಭಕ್ತಿ ಪೂರ್ವಕವಾಗಿ ಚೆನ್ನಾಗಿ ಸ್ತೋತ್ರ ಮಾಡಿಸಿಕೊಳ್ಳಲ್ಪಟ್ಟವನಾಗಿ, ಹತಯವನಬಲಃ – ಹತ = ಸಂಹಾರ ಮಾಡಲ್ಪಟ್ಟ ಯವನಬಲಃ = ಕಾಲಯವನನ ಸೈನ್ಯವುಳ್ಳವನಾಗಿ, ಮಾಗಧೇಶಾತ್ = ಜರಾಸಂಧನ ದೆಸೆಯಿಂದ, ಭೀತವತ್ = ಹೆದರಿದವನಂತೆ, ಭೂಯಃ = ಮತ್ತೆ, ಗೋಮಂತಂ = ಗೋಮಂತಕ ಪರ್ವತವನ್ನು, ಪ್ರಾಪ್ಯ = ಹೊಂದಿ, ಜಿತಮಗಧಪತಿಃ ಜಿತ = ಸೋಲಿಸಲ್ಪಟ್ಟ, ಮಗಧಪತಿಃ = ಜರಾಸಂಧನುಳ್ಳವನಾಗಿ, ಜಾತಶಾಂತಾಗ್ನಿಶೈಲಃ – ಜಾತ = ಉಂಟಾದ, ಶಾಂತ = ಆರಿಸಲ್ಪಟ್ಟ, ಅಗ್ನಿ = ಅಗ್ನಿಯುಕ್ತವಾದ, ಶೈಲಃ = ಪರ್ವತವುಳ್ಳವನಾಗಿ ದ್ವಾರಕಾಂ = ದ್ವಾರಕಾ ಪಟ್ಟಣವನ್ನು, ಆಗತ್ಯ = ಹೊಂದಿ, ಹೃದಿಕಸುತಗಿರಾ – ಹೃದಿಕಸುತ – ಕೃತವರ್ಮನ, ಗಿರಾ = ವಾಕ್ಯದಿಂದ, ಜ್ಞಾತ್ವಕೌಂತೇಯಕೃತ್ಯಃ – ಜ್ಞಾತ್ವ = ತಿಳಿಯಲ್ಪಟ್ಟ ಕೌಂತೇಯ = ಕುಂತೀಸುತರಾದ ಪಾಂಡವರ, ಕೃತ್ಯಃ = ವ್ಯಾಪಾರವುಳ್ಳವನಾಗಿ, ನೃಷು = ಜನರು, ಪಶ್ಯತ್ಸು = ನೋಡುತ್ತಿರಲು, ಭೈಷ್ಮೀಂ = ರುಕ್ಮಿಣೀದೇವಿಯನ್ನು ಆದಾಯ = ಸ್ವೀಕಾರ ಮಾಡಿ, ಭೂಭೃತಃ = ರಾಜರುಗಳನ್ನು, ಯುಧಿ = ಯುದ್ಧದಲ್ಲಿ, ಜಿತವಾನ್ = ಜಯಿಸಿದಂಥಾ, ಸಃ = ಆ ಶ್ರೀಕೃಷ್ಣನು, ನಃ = ನಮ್ಮಗಳಿಗೆ, ಪ್ರೀಯತಾಂ = ಪ್ರಸನ್ನನಾಗಲಿ.

**ವಿಗ್ರಹವಾಕ್ಯ :-** ಸಮ್ಯಕ್ ಸ್ತೂಯಮಾನಃ ಸಂಸ್ತೂಯಮಾನಃ ಯವನಸ್ಯ ಬಲಂ ಯವನಬಲಂ ಹತಂ ಯವನಬಲಂ ಯೇನಸಃ ಹತಯವನ ಬಲಃ ಮಗಧಸ್ಯ ಇಮೇ ಮಾಗಧಾಃ ಮಾಗಧಾನಾಂ ಈಶಃ ಮಾಗಧೇಶಃ ತಸ್ಮಾತ್ ಮಾಗಧೇಶಾತ್ ಮಗಧಸ್ಯ ಪತಿಃ ಮಗಧಪತಿಃ, ಜಿತಃ ಮಗಧಪತಿಃ ಯೇನ ಸಃ ಜಿತಮಗಧಪತಿಃ ಜಾತಃ ಶಾಂತಃ ಅಗ್ನಿಃ ಯಸ್ಯಸಃ ಜಾತಶಾಂತಾಗ್ನಿಃ, ಜಾತಶಾಂತಾಗ್ನಿಃ ಶೈಲಃ ಯಸ್ಯಸಃ ಜಾತಶಾಂತಾಗ್ನಿ ಶೈಲಃ ಹೃದಿಕಸ್ಯಸುತಃ ಹೃದಿಕಸುತಃ, ತಸ್ಯಗೀಃ ಹೃದಿಕಸುತಗೀಃ ತಯಾ ಹೃದಿಕಸುತ ಗಿರಾ ಕುಂತ್ಯಾಃ ಅಪತ್ಯಾನಿ ಪುಮಾಂಸಃ ಕೌಂತೇಯಾಃ, ಕೌಂತೇಯಾನಾಂ ಕೃತ್ಯಾನಿ ಕೌಂತೇಯಕೃತ್ಯಾನಿ, ಜ್ಞಾತ್ವಾನಿ ಕೌಂತೇಯಕೃತ್ಯಾನಿ ಯೇನ ಸಃ ಜ್ಞಾತ್ವಕೌಂತೇಯ ಕೃತ್ಯಃ ಭೀಷ್ಮಸ್ಯ ಅಪತ್ಯಂ ಸ್ತ್ರೀ ಭೈಷ್ಮೀ ಭುವಂ ಬಿಭ್ರತೀತಿ ಭೂಭ್ರತಃ ತಾನ್ ಭೂಭೃತಃ ॥

**ತಾತ್ಪರ್ಯ:-** ಶ್ರೀಕೃಷ್ಣನು ಹಿಂದೆ ನಿರೂಪಿಸಿದಂತೆ ಕಾಲಯವನನ ಸಂಹಾರಾನಂತರ ಮುಚುಕುಂದರಾಜನಿಂದ ನೋಡಲ್ಪಟ್ಟವನಾಗಿ ಆ ರಾಜನು ವಿಮೋಹಿತೋ ಯಂ ಜನ ಈಶಮಾಯಯಾ ಇವೇ ಮೊದಲಾಗಿ ಬಹು ಪ್ರಕಾರವಾಗಿ ಸ್ತೋತ್ರಮಾಡಲು ಆದರಿಂದ ಮುದಗೊಂಡು ಪ್ರಿಯವಚನಗಳಿಂದ ಮುಚುಕುಂದರಾಜನನ್ನು ಆನಂದಗೊಳಿಸಿ ಅವನನ್ನು ಕಳುಹಿಸಿಕೊಟ್ಟು ತಾನೂ ಸಹ ಪರ್ವತದ ಗುಹೆಯಿಂದ ಹೊರಬಂದು ಮಧುರಾಪಟ್ಟಣಕ್ಕೆ ಬಂದು ಅಲ್ಲಿ ಕಾಲಯವನನ ಸಮಸ್ತ ಸೈನ್ಯವನ್ನು ಸಂಹಾರ ಮಾಡಿ ಮತ್ತೆ ಯುದ್ಧಕ್ಕಾಗಿ ಆಗಮಿಸಿದ ಜರಾಸಂಧನನ್ನು ಜಯಿಸಿ, ಸೋತರೂ ಕೃಷ್ಣನನ್ನು ಗೆಲ್ಲಲೇಬೇಕೆಂಬ ಹಟದಿಂದ ಪುನ: ಯುದ್ಧಕ್ಕಾಗಿ ಬಂದ ಜರಾಸಂಧನನ್ನು ಕಂಡು ಭಯಗೊಂಡವನಂತೆ ಬಲರಾಮನೊಡನೆ ಗೋಮಂತಕ ಪರ್ವತಕ್ಕೆ ಬಂದನು. ಅಲ್ಲಿ ಸೈನ್ಯ ಸಮೇತನಾಗಿ ಯುದ್ಧಕ್ಕೆ ಬಂದ ಜರಾಸಂಧನು ಪರ್ವತಾಗ್ರ ಭಾಗದಲ್ಲಿ ಕೃಷ್ಣ ಬಲರಾಮರಿರುವುದನ್ನು ಅರಿತು ಅವರನ್ನು ಜೀವಂತ ಸುಟ್ಟುಬಿಡಬೇಕೆಂಬ ದುರಾಲೋಚನೆಯಿಂದ ಪರ್ವತದ ಸುತ್ತಲೂ ವಿಶಾಲವಾಗಿ ಬೆಳೆದು ತರಗಾದ ಹುಲ್ಲುಗಳಿಗೆ ಬೆಟ್ಟದ ಬುಡದಿಂದಲೇ ಬೆಂಕಿ ಇಟ್ಟನು. ಒಣಗಿದ ಹುಲ್ಲು ಹತ್ತಿಕೊಂಡು ಪರ್ವತ ಪ್ರಾಂತ್ಯ ಮತ್ತು ಸರ್ವತ್ರ ಅಗ್ನಿ ಜ್ವಾಲೆಯು ಪ್ರಬಲಿಸಿ ಧಗಧಗನೆ ಉರಿಯ ಹತ್ತಿತು. ಜರಾಸಂಧಾದಿಗಳು ಈ ಅಗ್ನಿಜ್ವಾಲೆಯಲ್ಲಿ ಶ್ರೀಕೃಷ್ಣ ಬಲರಾಮರು ಖಂಡಿತ ನಾಶವಾಗುವರೆಂದು ಆನಂದಪಡಹತ್ತಿದರು. ಜರಾಸಂಧನು ಅಗ್ನಿಜ್ವಾಲೆಯಿಂದ ತಮ್ಮನ್ನು ನಾಶಪಡಿಸಲು ಈ ತಂತ್ರ ಹೂಡಿರುವನೆಂದು ಅರಿತ ಶ್ರೀಕೃಷ್ಣ ಮತ್ತು ಬಲರಾಮರು ಅವನ ಅವಿವೇಕಕ್ಕಾಗಿ ನಸುನಕ್ಕು ತಮ್ಮ ಪಾದಾಂಗುಷ್ಠಗಳಿಂದ ಪರ್ವತವನ್ನು ಒತ್ತಿ ಹನ್ನೊಂದು ಯೋಜನ ಕೆಳಕ್ಕೆ ತಳ್ಳಿ ಆ ಪರ್ವತದಲ್ಲಿ ಉತ್ಪನ್ನವಾದ ಮಹಾಜಲದಿಂದ ಅಗ್ನಿಯನ್ನು ಶಾಂತಗೊಳಿಸಿ ಅಲ್ಲಿಂದ ದ್ವಾರಕೆಗೆ ಮರಳಿದರು.

ಒಂದಾನೊಂದು ದಿವಸ ಸಭೆಯಲ್ಲಿ ರಾಜರುಗಳಿಂದ ಸಂಸೇವ್ಯನಾಗಿ ಶ್ರೀಕೃಷ್ಣನು ಕುಳಿತಿರಲು ಸೋದರತ್ತೆಯ ಮಕ್ಕಳಾದ ಪಾಂಡವರು ಗುರುದಕ್ಷಿಣಾರೂಪವಾಗಿ ಸೈನ್ಯ ಯುಕ್ತನಾದ ಪಾಂಚಾಲ ರಾಜನಾದ ದ್ರುಪದ ಮಹಾರಾಜನನ್ನು ಯುದ್ಧದಲ್ಲಿ ಜಯಿಸಿ ದ್ರುಪದನನ್ನು ಹೆಡೆಮುರಿಗೆ ಕಟ್ಟಿ ತಂದು ಗುರುಪಾದಗಳಲ್ಲಿ ಅರ್ಪಿಸಿದ ವಿಚಾರ ತಿಳಿದು ಹರ್ಷ-ಗೊಂಡು ಆ ವಿಚಾರಗಳನ್ನು ವಿಸ್ತಾರವಾಗಿ ತಿಳಿದು ಬರಲು ಹಸ್ತಿನಾಪುರಕ್ಕೆ ಕೃತವರ್ಮನನ್ನು ಕಳಿಸಿದನು. ಕೃತವರ್ಮನು ಶ್ರೀಕೃಷ್ಣನ ಅಪ್ಪಣೆಯಂತೆ ಹಸ್ತಿನಾವತಿಗೆ ಹೋಗಿ ಅಲ್ಲಿ ಪಾಂಡವರನ್ನು ಕಂಡು ಅಲ್ಲಿಂದ ದ್ವಾರಕೆಗೆ ಮರಳಿ ಎಲ್ಲ ವಿಚಾರಗಳನ್ನೂ ಶ್ರೀಕೃಷ್ಣನಲ್ಲಿ ಅರುಹಿದನು.

ಇದಾದ ಕೆಲದಿನಗಳ ಮೇಲೆ ಕುಂಡಿನಪುರದಲ್ಲಿ ರುಕ್ಮಿಣಿಯ ಸ್ವಯಂವರ ನಡೆಯುವ ವಿಚಾರವನ್ನು, ರುಕ್ಮಿಣೀ ತನ್ನನ್ನೇ ವರಿಸಬೇಕೆಂದು ನಿಶ್ಚಯಿಸಿ ತನ್ನಲ್ಲೇ ಮನವಿಟ್ಟಿರುವ ವಿಚಾರವನ್ನೂ, ಹಾಗೂ ರುಕ್ಮಿಣಿಯ ಅಣ್ಣನಾದ ರುಕ್ಮಿಯು ಅವಳನ್ನು ತನ್ನ ಮಿತ್ರನಾದ ಶಿಶುಪಾಲನಿಗೆ ಕೊಡಬೇಕೆಂದಿರುವ ವಿಚಾರಗಳನ್ನು ಅರಿತನು. ಅದೇ ಕಾಲದಲ್ಲಿ ರುಕ್ಮಿಣಿಯು ಬ್ರಾಹ್ಮಣನೊಬ್ಬನ ಹಸ್ತದಲ್ಲಿ ''ಶ್ರುತ್ವಾಗುಣಾನ್ ಭುವನಸುಂದರ ಸಂಗ ಮಾಂಸ್ತೆ, ನಿರ್ವಿಶ್ಯ ಕರ್ಣವಿವರಂ ಹರತೋಂ-ಗತಾಪಂ ರೂಪಂ ಪರಂ ಭುವನ ಮಂಗಲ ಮಂಗಲಂ ತತ್ ಇವೇ ಮೊದಲಾದ ಅನೇಕವಿಧ ಸ್ತೋತ್ರಪೂರ್ವಕವಾಗಿ ಬರೆದು ಕಳುಹಿಸಿದ ಪ್ರೇಮ ಪತ್ರವನ್ನು ಓದಿ ನೋಡಿ ಸಂತೋಷಗೊಂಡು ಶ್ರೀಕೃಷ್ಣನು ರುಕ್ಮಿಣಿಯ ಮನದಾಶೆಯನ್ನು ಪೂರ್ಣ-ಮಾಡಲು ಬಲರಾಮಾದಿ ಸಕಲ ಗೋಪಾಲಕರೊಡನೆ ರಥದಲ್ಲಿ ಕುಳಿತು ಮಹಾಸೇನೆಯಿಂದ ಕೂಡಿಕೊಂಡು ಕುಂಡಿನ-ಪುರಕ್ಕೆ ಬಂದು ಭೀಷ್ಮಕ ರಾಜನಿಂದ ಪೂಜಿತನಾಗಿ ತನಗೆ ಪತ್ರವನ್ನು ತಂದುಕೊಟ್ಟ ಬ್ರಾಹ್ಮಣನನ್ನು ರುಕ್ಮಿಣಿಯ ಬಳಿಗೆ ತಾನು ಬಂದಿರುವ ವಾರ್ತೆಯನ್ನರುಹಲು ಕಳುಹಿಸಿಕೊಟ್ಟನು. ರುಕ್ಮಿಣಿಯು ಮಹದಾನಂದಭರಿತಳಾಗಿ ಮುಂದೆ ಮಾಡಬೇಕಾದ ವಿಚಾರಗಳನ್ನು ಆ ಬ್ರಾಹ್ಮಣನೊಡನೆ ಹೇಳಿ ಕಳುಹಿಸಲು ಅದನ್ನು ಬ್ರಾಹ್ಮಣನಿಂದ ತಿಳಿದು ಮಾಧವನು ಮುದಗೊಂಡನು. ರುಕ್ಮಿಣಿಯು ಅಂಬಿಕಾ ಪೂಜಾವ್ಯಾಜದಿಂದ ಅರಮನೆಯಿಂದ ಹೊರಟು ಅನೇಕ ಕಾವಲು ಭಟರಿಂದ ಸುತ್ತುವರೆ-ಯಲ್ಪಟ್ಟವಳಾಗಿ ಅಂಬಿಕಾ ಮಂದಿರಕ್ಕೆ ಬಂದು ಪಾರ್ವತಿಯನ್ನು ಪೂಜಿಸಿ ನಂತರ ಶಚೀದೇವಿಯನ್ನು ಪೂಜಿಸಿ ಗುಡಿಯಿಂದ ಹೊರಬರುತ್ತಿರುವಾಗ ರಾಜಮಂಡಲದಿಂದ ಪರಿವೃತಳಾದ, ಸಾಕ್ಷಾತ್ ಇಂದಿರೆಯೇ ಆದ, ಮನೋಹರವಾದ ಮುಂಗುರುಳುಗಳನ್ನು ಬಲಕರಗಳಿಂದ ಮೇಲಕ್ಕೆತ್ತುತ್ತಾ ತನ್ನ ಸುಂದರ ಮುಖಾರವಿಂದವನ್ನು ನೋಡುತ್ತಿರುವ, ರುಕ್ಮಿಣಿ-ಯನ್ನು ಕರಪಿಡಿದು ರಥದಲ್ಲಿ ಕೂಡಿಸಿಕೊಂಡು ಶ್ರೀಕೃಷ್ಣನು ಪ್ರಯಾಣ ಸನ್ನದ್ಧನಾದನು. ಆಗ ರುಕ್ಮಿಣಿಯನ್ನು ಅಪಹರಿಸಿಕೊಂಡು ಹೋಗುತ್ತಿರುವನೆಂಬ ಕೋಪದಿಂದ ಶಿಶುಪಾಲನ ಪಕ್ಷಪಾತಿಗಳಾದ ಸಾಲ್ವಜರಾಸಂಧಾದಿ ಸಕಲ ಭೂಪಾಲರು ಶ್ರೀಕೃಷ್ಣನ ಮೇಲೆ ಯುದ್ಧಕ್ಕೆ ಬರಲು ಅವರೆಲ್ಲರನ್ನೂ ಯುದ್ಧದಲ್ಲಿ ಜಯಿಸಿ, ತಮ್ಮವರೆಲ್ಲರೊಡನೆ ಮೆಲ್ಲ ಮೆಲ್ಲನೆ ದ್ವಾರಕಾಪುರಕ್ಕೆ ಬಂದು ಸೇರಿ ಸರ್ವರನ್ನೂ ಆನಂದಗೊಳಿಸಿದನು. ಹೀಗೆ ಶ್ರೀರುಕ್ಮಿಣಿಯ ಪ್ರಾಣಿಗ್ರಹಣ ಮಾಡಿದ ಶ್ರೀಕೃಷ್ಣನು ನಮ್ಮನ್ನೆಲ್ಲಾ ರಕ್ಷಿಸಲಿ ಎಂದು ಭಾವ.

**ಅಲಂಕಾರ:-** ಇಲ್ಲಿ ''ಕಾರಕದೀಪಕಾಲಂಕಾರ''ವಿದೆ. ಶ್ರೀಕೃಷ್ಣನು ಮುಚುಕುಂದನಿಂದ ಸ್ತುತ್ಯನಾದನು, ಕಾಲಯವನನ ಸೈನ್ಯವನ್ನು ಸದೆಬಡಿದನು, ಪರ್ವತಕ್ಕೆ ಹತ್ತಿದ ಅಗ್ನಿಯನ್ನು ಆರಿಸಿದನು. ತನ್ನವರಾದ ಪಾಂಡವರು ದ್ರುಪದನನ್ನು ಜಯಿಸಿದುದನ್ನು ಕೇಳಿ ಸಂತೋಷಗೊಂಡನು. ಕುಂಡಿನಪುರಕ್ಕೆ ಬಂದು ರುಕ್ಮಿಣಿಯನ್ನು ಅಪಹರಿಸಿದನು. ಹಿಂಬಾಲಿಸಿದ ಶತ್ರುರಾಜರನ್ನು ಸೋಲಿಸಿದನು, ರುಕ್ಮಿಣಿಯನ್ನು ಲಗ್ನವಾದನು, ಮುಂತಾದ ಅನೇಕ ಕ್ರಿಯೆಗಳನ್ನು ಒಂದೇ ಕಾರಕವಾದ ಶ್ರೀಕೃಷ್ಣನಿಗೆ ಅನ್ವಯಿಸಿ ವರ್ಣಿಸಿರುವುದರಿಂದ ಇಲ್ಲಿ ''ಕಾರಕದೀಪಕಾಲಂಕಾ''ರವಿದೆ.

**ಲಕ್ಷಣ:-** ಕ್ರಮಿಕೈಕಗತಾನಾಂತು ಗುಂಫಃ ಕಾರಕದೀಪಕಂ

**ಉದಾ:-** ಗಚ್ಛತ್ಯಾಗಚ್ಛತಿಪುನಃ ಪಾಂಥಃ ಪಶ್ಯತಿ ಪೃಚ್ಛತಿ ॥ 14 ॥

**ವೈರೂಪ್ಯಂ ರುಕ್ಮಿಣೋ ಯೋऽಕೃತ ಮಣಿಸಹಿತಾಂ ಜಾಂಬವದ್ದೇಹಜಾತಾಂ**
**ಸತ್ಯಾಂ ತೇನೈವ ಯುಕ್ತಾಮಪಿ ಪರಿಜಗೃಹೇ ಹಸ್ತಿನಂ ಕುಲ್ಯಹೇತೋಃ।**
**ಯಾತೋ ವ್ಯಸ್ಯಾತ್ರ ಸತ್ಯಾಶುಚಮಥ ಸಮಗಾದ್ ದ್ವಾರಕಾಂ ಸತ್ಯಯೇತೋ**
**ದ್ರಷ್ಟುಂ ಪಾರ್ಥಾನ್ ಸಕೃಷ್ಣಾನ್ ದ್ರುಪದಪುರಮಗಾದ್ವಿದ್ಧಲಕ್ಷ್ಯಾನ್ ಸ ಪಾಯಾತ್ ॥ 15 ॥**

**ಅನ್ವಯಾರ್ಥ:-** ಯಃ = ಶ್ರೀಕೃಷ್ಣನು, ರುಕ್ಮಿಣಃ = ರುಕ್ಮಿನಾಮಕನಿಗೆ, ವೈರೂಪ್ಯಂ = ವಿರೂಪ (ಕುರೂಪ)ವನ್ನು, ಅಕೃತ = ಮಾಡಿದನೋ, ಮಣಿಸಹಿತಾಂ= ಸ್ಯಮಂತಕಮಣಿಯಿಂದ ಕೂಡಿದ, ಜಾಂಬವದ್ದೇಹಜಾತಾಂ = ಜಾಂಬವಂತನ ಪುತ್ರಿಯಾದ ಜಾಂಬವತಿಯನ್ನು, ತೇನೈವ = ಸ್ಯಮಂತಕ ಮಣಿಯಿಂದ, ಯುಕ್ತಾಂ = ಸಹಿತಳಾದ, ಸತ್ಯಾಮಪಿ = ಸತ್ಯಭಾಮೆಯನ್ನೂ ಕೂಡ, ಪರಿಜಗೃಹೇ = ಪರಿಗ್ರಹಿಸಿದನೋ, ಹಾಸ್ತಿನಂ = ಹಸ್ತಿನಾಪುರವನ್ನು, ಕುಲ್ಯಹೇತೋಃ = ಅರಗಿನ ಮನೆಯ ದಹನ ಮುಂತಾದ ವೃತ್ತಾಂತ ವಿಚಾರಕ್ಕೋಸ್ಕರವಾಗಿ, ಯಾತಃ = ಹೊಂದಿದನೋ, ಅತ್ರ = ಹಸ್ತಿನಾಪುರದಲ್ಲಿ, ಸತ್ಯಾಶುಚಂ = ಸತ್ಯಭಾಮೆಯ ದುಃಖವನ್ನು, ವ್ಯಸ್ಯ = ಪರಿಹಾರ ಮಾಡಿ, ಸತ್ಯಯಾ = ಸತ್ಯಭಾಮೆಯಿಂದ, ಇತಃ = ಸಹಿತನಾಗಿ, ದ್ವಾರಕಾಂ = ದ್ವಾರಕಾಪಟ್ಟಣಕ್ಕೆ , ಸಮಗಾತ್ = ಹೋದನೋ, ಅಥ= ಅನಂತರದಲ್ಲಿ, ವಿದ್ಧಲಕ್ಷ್ಯಾನ್ = ವಿದ್ಧ ಹೊಡೆಯಲ್ಪಟ್ಟ, ಲಕ್ಷ್ಯಾನ್ = ಬಾಣದಗುರಿ ಉಳ್ಳ (ಮತ್ಸ್ಯ ಯಂತ್ರವನ್ನು ಭೇದಿಸಿದ) ಸಕೃಷ್ಣಾನ್ = ದ್ರೌಪದೀಸಹಿತರಾದ, ಪಾರ್ಥಾನ್ = ಪಾಂಡವರನ್ನು, ದ್ರಷ್ಟುಂ = ನೋಡುವುದಕ್ಕೋಸ್ಕರವಾಗಿ, ದ್ರುಪದಪುರಂ =ದ್ರುಪದ ರಾಜನ ಪಟ್ಟಣವಾದ ಪಾಂಚಾಲ ನಗರವನ್ನು, ಅಗಾತ್ = ಹೊಂದಿದನೋ, ಸಃ = ಅಂತಹ ಶ್ರೀಕೃಷ್ಣನು, ಪಾಯಾತ್ = ನನ್ನನ್ನು ರಕ್ಷಿಸಲಿ.

**ವಿಗ್ರಹವಾಕ್ಯ :-** ವಿಕೃತರೂಪಂ ಯಸ್ಯಸಃ ವಿರೂಪಃ, ವಿರೂಪಸ್ಯ ಭಾವಃ ವೈರೂಪ್ಯಂ ತತ್ ವೈರೂಪ್ಯಮ್ ॥ ಮಣಿನಾ ಸಹಿತಾ ಮಣಿಸಹಿತಾ ತಾಂಮಣಿಸಹಿತಾಮ್ ॥ ದೇಹಾಜ್ಜಾತಾ ದೇಹಜಾತಾ, ಜಾಂಬವತಃ ದೇಹಜಾತಾ, ಜಾಂಬವ-ದ್ದೇಹಜಾತಾ ತಾಂ ಜಾಂಬವದ್ದೇಹಜಾತಾಮ್ ॥ ಕುಲ್ಯಸ್ಯ ಹೇತುಃ ಕುಲ್ಯ ಹೇತುಃ ತಸ್ಮಾತ್ ಕುಲ್ಯಹೇತೋಃ ॥ ಸತ್ಯಾಯಃ ಶುಕ್ ಸತ್ಯಾಶುಕ್ ತಾಂ ಸತ್ಯಾಶುಚಮ್ ॥ ಪೃಥಾಯಾಃ ಇಮೇ ಪಾರ್ಥಾಃ ತಾನ್ ಪಾರ್ಥಾನ್ ॥ ಕೃಷ್ಣಯಾ ಸಹಿತಾಃ ಸಕೃಷ್ಣಾಃ, ತಾನ್ ಸಕೃಷ್ಣಾನ್ ॥ ದ್ರುಪದಸ್ಯ ಪೂಃ ದೃಪದಪೂಃ ತಾಂ, ದೃಪದಪುರಮ್ ॥ ವಿದ್ಧಂ ಲಕ್ಷ್ಯಂ ಯೈಸ್ತೇ ವಿದ್ಧಲಕ್ಷ್ಯಾಃ ,ತಾನ್ ವಿದ್ಧಲಕ್ಷ್ಯಾನ್ ॥

**ತಾತ್ಪರ್ಯ:** ಶ್ರೀಕೃಷ್ಣನು ರುಕ್ಮಿಣಿಯನ್ನು ಅಪಹರಿಸಿ ಅವಳನ್ನು ರಾಕ್ಷಸ ವಿವಾಹ ಕ್ರಮದಂತೆ ಮದುವೆಯಾದುದನ್ನು ಕಂಡು ಸಹಿಸದ ರುಕ್ಮಿಣಿಯು ಕೃಷ್ಣನ ಮೇಲೆ ಯುದ್ಧಕ್ಕೆ ಬರಲು ರುಕ್ಮಿಣಿಯ ಪ್ರಾರ್ಥನೆಯಂತೆ ಅವನನ್ನು ವಿರೂಪಗೊಳಿಸಿ ಜೀವದಾನ ಮಾಡಿ ಕಳುಹಿಸಿ ರುಕ್ಮಿಣಿಯೊಡನೆ ದ್ವಾರಕೆಗೆ ಬಂದು ತನ್ನವರಾದ ಸರ್ವ ಭೂಪಾಲರನ್ನೂ ಆಹ್ವಾನಿಸಿ ವೇದೋಕ್ತಕ್ರಮದಿಂದ ರುಕ್ಮಿಣಿಯನ್ನು ಪರಿಗ್ರಹಿಸಿ ಸರ್ವರನ್ನೂ ಸಂತೋಷಗೊಳಿಸಿ ಸುಖದಿಂದಿದ್ದನು. ಒಂದಾನೊಂದು ಸಮಯ ಸತ್ರಾಜಿತ್ ರಾಜನು ಸೂರ್ಯಾಂತರ್ಗತನಾದ ಶ್ರೀ ಹರಿಯನ್ನು ತಪಸ್ಸಿನಿಂದ ಸಂತೋಷಪಡಿಸಿ ಶ್ರೀಹರಿಯಿಂದ ಶತಭಾರಭಂಗಾರವನ್ನು ನೀಡುವ, ಸೂರ್ಯಮಂಡಲದಂತೆಯೇ ಪ್ರಕಾಶಮಾನವಾದ ಸ್ಯಮಂತಕಮಣಿಯನ್ನು ಪಡೆದು ಅದನ್ನು ತನ್ನ ಕಂಠದಲ್ಲಿ ಧರಿಸಿ ಶ್ರೀಕೃಷ್ಣ ಸೇವಾರ್ಥವಾಗಿ ದ್ವಾರಕೆಗೆ ಬಂದನು. ಕುಶಲ ಪ್ರಶ್ನಾದಿಗಳಾದ ನಂತರ ಸತ್ರಾಜಿತನ ಮನದಲ್ಲಿರುವ ಲೋಭಬುದ್ಧಿಯನ್ನು ಪ್ರಕಟಗೊಳಿಸಲು ''ರಾಜನ್, ಈ ಸ್ಯಮಂತಕಮಣಿಯನ್ನು ನನಗೆ ಕೊಡು'' ಎಂದು ಕೇಳಲು ಸತ್ರಾಜಿತನು ಮಣಿಯನ್ನು ಕೊಡಲು ನಿರಾಕರಿಸಿ ಮನೆಗೆ ತೆರಳಿದನು.

ಇದಾದ ಕೆಲದಿನಗಳ ನಂತರ ಸತ್ರಾಜಿತನ ಸಹೋದರನಾದ ಪ್ರಸೇನರಾಜನು ಸ್ಯಮಂತಕ ಮಣಿಯುನ್ನು ಕಂಠದಲ್ಲಿ ಧರಿಸಿ ಕುದುರೆಯನ್ನೇರಿ ಬೇಟೆಗಾಗಿ ಹೊರಟನು. ಕಾಡಿನಲ್ಲಿ ಒಂದು ಸಿಂಹವು ಅವನನ್ನು ಸಂಹರಿಸಿ ಮಣಿಯೊಡನೆ ಹೊರಟಿತು. ಆಗ ಋಕ್ಷರಾಜನಾದ ಜಾಂಬವಂತನು ಆ ಸಿಂಹವನ್ನು ಸಂಹರಿಸಿ ಮಣಿಯೊಡನೆ ತನ್ನ ಗುಹೆಗೆ ಬಂದು ಮಗನ ತೊಟ್ಟಿಲಿಗೆ ಆ ಮಣಿಯನ್ನು ಕಟ್ಟಿದನು. ಇತ್ತ ಎಷ್ಟು ವೇಳೆಯಾದರು ಪ್ರಸೇನನು ಬರದಿರಲು "ಶ್ರೀಕೃಷ್ಣನೇ ಆಮಣಿಯ ಮೇಲಿನ ಮೋಹದಿಂದ ನನ್ನ ತಮ್ಮನನ್ನು ಸಂಹರಿಸಿದ್ದಾನೆ" ಎಂದು ಸತ್ರಾಜಿತನು ಗುಲ್ಲೆಬ್ಬಿಸಿದನು. ಶ್ರೀ ಕೃಷ್ಣನು ತನ್ನ ಮೇಲೆ ಬಂದ ಅಪವಾದವನ್ನು ಕಳೆದುಕೊಳ್ಳಲೋಸುಗ ಯಾದವ ವೀರರೊಡನೆ ಪ್ರಸೇನನನ್ನು ಹುಡುಕುತ್ತಾ ಹೊರಟು ಒಂದು ಕಾಡಿಗೆ ಬಂದನು. ಅಲ್ಲಿ ಮೃತನಾಗಿದ್ದ ಪ್ರಸೇನನನ್ನು ಕಂಡು ಮಣಿಯು ಅಲ್ಲಿಲ್ಲವೆಂದರಿತು ಮುಂದೆ ಹೋಗುತ್ತಿರಲು ಅಲ್ಲಿ ಮೃತವಾಗಿ ಬಿದ್ದಿದ್ದ ಸಿಂಹವನ್ನು ಕಂಡನು. ಅಲ್ಲಿಯೂ ಮಣಿಯು ಇಲ್ಲದಿರಲು ಅಲ್ಲಿಯೇ ಇದ್ದ ಹೆಜ್ಜೆಯ ಜಾಡನ್ನು ಅನುಸರಿಸಿ ಕೊನೆಗೆ ಒಂದು ಗುಹೆಯ ಬಳಿಗೆ ಬಂದನು. ಯಾದವರನ್ನು ಗುಹೆಯ ಬಾಗಿಲ ಬಳಿನಿಲ್ಲಿಸಿ ತಾನೊಬ್ಬನೇ ಗುಹೆಯನ್ನು ಪ್ರವೇಶಿಸಿ ಅಲ್ಲಿ ಒಬ್ಬ ಕನ್ಯಾಮಣಿಯನ್ನೂ ಸ್ಯಮಂತಕಮಣಿಯನ್ನೂ ಜಾಂಬವಂತನನ್ನೂ ಕಂಡನು. ನಂತರ ವಾದ–ವಿವಾದವಾಗಿ ಕೊನೆಗೆ ಕೃಷ್ಣ ಜಾಂಬವಂತರಲ್ಲಿ ಯುದ್ಧ ಪ್ರಾರಂಭವಾಯಿತು. ಶ್ರೀಕೃಷ್ಣನು 28 ದಿವಸ ಪರ್ಯಂತರವಾಗಿ ಜಾಂಬವಂತನೊಡನೆ ಬಾಹುಯುದ್ಧ ಮಾಡಿ ಅವನನ್ನು ಸೋಲಿಸಿದನು. ಯುದ್ಧಶ್ರಾಂತನಾದ ಜಾಂಬವಂತನು ತನ್ನ ಉಪಾಸ್ಯಮೂರ್ತಿಯಾದ ಶ್ರೀರಾಮನೇ ಕೃಷ್ಣನೆಂದರಿತು :

"ಯಸ್ಯೈಷ ಉತ್ಕಟಿತರೋಷಕಟಾಕ್ಷಮೋಕ್ಷೈ–
ರ್ವರ್ತ್ಮಾಽತನೋತ್ ಕ್ಷುಭಿತನಕ್ರತಿಮಿಂಗಿಲೋಽಬ್ಧಿಃ ।
ಸೇತುಃಕೃತಃ ಸ್ವಯಶ ಉಜ್ವಲಿತಾ ಚ ಲಂಕಾ
ರಕ್ಷಃ ಶಿರಾಂಸಿ ಭುವಿ ರೇಜುರಿಷುಕ್ಷತಾನಿ" ॥

ಇತ್ಯಾದಿಯಾಗಿ ಸ್ತುತಿಸಲು ಅವನಲ್ಲಿ ಅನುಗ್ರಹಮಾಡಿ ಅವನನ್ನು ಯುವಕನನ್ನಾಗಿಸಿ ಜಾಂಬವಂತನ ಪ್ರಾರ್ಥನೆ–ಯಂತೆ ಸ್ಯಮಂತಕಮಣಿಸಹಿತಳಾದ ಜಾಂಬವತಿಯನ್ನು ಸ್ವೀಕರಿಸಿ ಅವನ ಮನೋಽಭೀಷ್ಟವನ್ನು ಪೂರ್ಣಮಾಡಿ ಗುಹೆಯಿಂದ ಹೊರ ಬಂದು ಅಲ್ಲಿ ಯಾದವರನ್ನು ಕಾಣದೇ ಬಹುಶಃ 28 ದಿವಸಗಳಾದರೂ ತಾನೂ ಬರದಿರಲು ಮೃತನಾಗಿರುವನೆಂದು ತಿಳಿದು ದ್ವಾರಕೆಗೆ ಹೋಗಿರಬಹುದು ಎಂದು ಊಹಿಸಿ, ಜಾಂಬವತಿಯೊಡನೆ ದ್ವಾರಕೆಗೆ ಬಂದು ಅಲ್ಲಿ ತನ್ನ ವಿಯೋಗದಿಂದ ದುಃಖಿತರಾಗಿದ್ದ ಮಾತಾಪಿತೃಬಾಂಧವರನ್ನು ಸಂತೋಷಪಡಿಸಿ ಸಮಸ್ತ ಯಾದವರ ಸಮಕ್ಷ ಸತ್ರಾ ಜಿತ ರಾಜನನ್ನು ಕರೆಸಿ ಅವನಿಗೆ ಸಮಸ್ತ ವಿಚಾರವನ್ನೂ ತಿಳಿಸಿ ಸ್ಯಮಂತಕ ಮಣಿಯನ್ನು ಅವನಿಗೆ ಕೊಟ್ಟನು. ಸತ್ರಾಜಿತನು ಅನಾವಶ್ಯಕವಾಗಿ ಕೃಷ್ಣನ ಮೇಲೆ ಅಪವಾದ ಹೊರಿಸಿದ್ದಕ್ಕಾಗಿ ಪಶ್ಚಾತ್ತಾಪಪಟ್ಟು ಆ ಅಪರಾಧ ಶಾಂತ್ಯರ್ಥವಾಗಿ ತನ್ನ ಕುಮಾರಿಯಾದ ಸಾಕ್ಷಾತ್ ಲಕ್ಷ್ಮೀ ಸ್ವರೂಪಿಣಿಯಾದ ಸತ್ಯಭಾಮಾ ದೇವಿಯನ್ನೂ ಸ್ಯಮಂತಕ ಮಣಿಯನ್ನೂ ಸ್ವೀಕರಿಸಬೇಕೆಂದು ಶ್ರೀಕೃಷ್ಣನನ್ನು ಪ್ರಾರ್ಥಿಸಿದನು. ಶ್ರೀಕೃಷ್ಣನು ಮಣಿಸಹಿತರಾದ ಜಾಂಬವತೀ–ಸತ್ಯಭಾಮೆಯರನ್ನು ವಿವಾಹವಾಗಿ ಮಣಿಯನ್ನು ಮತ್ತೆ ಸತ್ರಾಜಿತನಿಗೇ ಕೊಟ್ಟು ಮಡದಿಯರೊಡನೆ ಮುದದಿಂದ ವಿಹರಿಸುತ್ತಿದ್ದನು.

ಇದಾದ ಕೆಲದಿನಗಳಾದ ಮೇಲೆ ಒಂದು ದಿನ ಕೌರವರ ಕುತಂತ್ರದಿಂದ ಅರಗಿನಮನೆಯ ಬೆಂಕಿಯಲ್ಲಿ ಪಾಂಡವರು ಮೃತರಾದರೆಂಬ ವಾರ್ತೆಯನ್ನು ಕೇಳಿ ಬಾಂಧವರ ವಿಚಾರಾರ್ಥವಾಗಿ ಸತ್ಯಭಾಮಾಸಹಿತನಾಗಿ ಶ್ರೀಕೃಷ್ಣನು ಹಸ್ತಿನಾಪುರಕ್ಕೆ ಹೋಗಿ ಅಲ್ಲಿ ಧೃತರಾಷ್ಟ್ರಾದಿಗಳನ್ನು ಸಾಂತ್ವನಗೊಳಿಸಿದನು. ಅದೇ ವೇಳೆಗೆ ಅಕ್ರೂರ ಕೃತವರ್ಮರು ಅಲ್ಲಿಗೆ ಬಂದು "ಸ್ಯಮಂತಕ ಮಣಿಯ ಮೇಲಿನ ಮೋಹದಿಂದ ಶರಧನ್ವನು ಸತ್ರಾಜಿತನನ್ನು ಸಂಹರಿಸಿ ಮಣಿಯನ್ನು ಅಪಹರಿಸಿಕೊಂಡು ಹೋದನೆಂಬ

ವಾರ್ತೆಯನ್ನು ಹೇಳಿದರು. ಪಿತೃಮರಣವಾರ್ತೆಯನ್ನು ಕೇಳಿ ದುಃಖಿತಳಾದ ಸತ್ಯಭಾಮೆಯನ್ನು ಸಮಾಧಾನಪಡಿಸಿ ಕೃಷ್ಣನು ಅವಳೊಡನೆ ದ್ವಾರಕೆಗೆ ಬಂದು ಸೇರಿದನು.

ಅದೇ ಸಮಯದಲ್ಲಿ ಪಾಂಚಾಲರಾಜನಾದ ದ್ರುಪದರಾಜನು ತನ್ನ ಪುತ್ರಿಯಾದ ದ್ರೌಪದಿಯ ಸ್ವಯಂವರ-ವನ್ನೇರ್ಪಡಿಸಿ ಅದಕ್ಕಾಗಿ ಶ್ರೀಕೃಷ್ಣನಿಗೆ ಆಹ್ವಾನ ಕಳಿಸಿದ್ದರಿಂದ ಶ್ರೀಕೃಷ್ಣನು ಸ್ವಯಂವರಕ್ಕಾಗಿ ಪಾಂಚಾಲನಗರಕ್ಕೆ ಬಂದು, ಸ್ವಯಂವರಪಣವಾಗಿಟ್ಟಿದ್ದ ಮತ್ಸ್ಯಯಂತ್ರವನ್ನು ಭೇದಿಸಿ ದ್ರೌಪದಿಯೊಡನೆ ಬ್ರಾಹ್ಮಣ ವೇಷದಲ್ಲಿದ್ದ ಕುಂಬಾರನ ಮನೆ-ಯಲ್ಲಿದ್ದ ಪಾಂಡವರನ್ನು ಕಂಡು ಅವರಿಂದ ಪೂಜಿತನಾಗಿ ಶ್ರೀಕೃಷ್ಣನು ಸರ್ವರನ್ನೂ ಆನಂದಗೊಳಿಸಿದನು, ಇತ್ಯಾದಿ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುವುದು. ಇಂಥ ಮಹಾಮಹಿಮನಾದ ಶ್ರೀಕೃಷ್ಣನು ನಮ್ಮನ್ನು ಕಾಪಾಡಲಿ ಎಂದು ಭಾವ.

**ಅಲಂಕಾರ:** ಇಲ್ಲಿ ''ಪ್ರಹರ್ಷಣಾಲಂಕಾರ''ವಿದೆ. ಶ್ರೀಕೃಷ್ಣನು ತನಗೆ ಬಂದ ಚೌರ್ಯಾಪವಾದವನ್ನು ಕಳೆದುಕೊಳ್ಳುವ ವಾಂಛಿತಾರ್ಥಕ್ಕಾಗಿ ಪ್ರಯತ್ನಿಸಿ, ಅಪವಾದ ನಿವೃತ್ತಿ ಪೂರ್ವಕ, ಅದಕ್ಕಿಂತಲೂ ಮಿಗಿಲಾದ ಜಾಂಬವತೀ ಮತ್ತು ಸತ್ಯಭಾಮಾ ಎಂಬಿಬ್ಬರನ್ನು ಪಡೆದನೆಂದು ವರ್ಣಿಸಿರುವುದರಿಂದ ಪ್ರಹರ್ಷಣಾಲಂಕಾರ ವಿದೆ.

**ಲಕ್ಷಣ:-** ವಾಂಛಿತಾದಧಿಕಾರ್ಥಸ್ಯ ಸಂಸಿದ್ಧಿಶ್ಚ ಪ್ರಹರ್ಷಣಮ್ ।

**ಉದಾ:-** ದೀಪಮುದ್ಯೋತಯೇದ್ಯಾವತ್ತಾವದಭ್ಯುದಿತೋ ರವಿಃ ॥

ಇಲ್ಲಿ ಪರಿಜಗೃಹೇ ಎಂಬ ಕ್ರಿಯಾಪದವಿದೆ. ಪರಿ ಉಪಸರ್ಗಪೂರ್ವಕ ಗ್ರಹ–ಉಪದಾನೇ ಎಂಬ ಧಾತುವಿನ ಸಕರ್ಮಕ ಕರ್ತರಿ ಲಿಟ್ ಆತ್ಮನೇಪದಿ ಪ್ರಥಮಪುರುಷ ಏಕವಚನದಲ್ಲಿ ಪರಿಜಗೃಹೇ ಎಂದಾಗಿದೆ.

| | | | |
|---|---|---|---|
| **ರೂಪ :-** | ಜಗೃಹೇ | ಜಗೃಹಾತೇ | ಜಗೃಹಿರೇ |
| | ಜಗೃಹಿಷೇ | ಜಗೃಹಾಥೇ | ಜಗೃಹಿಧ್ವೇ |
| | ಜಗೃಹೇ | ಜಗೃಹಿವಹೇ | ಜಗೃಹಿಮಹೇ ॥ |

**ಕೃಷ್ಣಃ ಪ್ರಾಪ್ಯಾಥ ಸತ್ರಾಜಿದಹಿತವಧಕೃದ್ಯಃ ಶ್ವಫಲ್ಕಸ್ಯ ಸೂನೌ**
**ರತ್ನಂ ಸಂದರ್ಶ್ಯ ರಾಮಂ ವ್ಯಧಿತ ಗತರುಷಂ ದ್ರಷ್ಟುಕಾಮಃ ಪ್ರತಸ್ಥೇ ।**
**ಇಂದ್ರಪ್ರಸ್ಥಸ್ಥಪಾರ್ಥಾನಥ ಸಹವಿಜಯೋ ಯಾಮುನಂ ತೀರಮಾಯನ್**
**ಕಾಲಿಂದೀಂ ತತ್ರ ಲಬ್ಧ್ವಾ ಯಮಸುತಪುರಕೃತ್ಪಾತು ಮಾಂ ದ್ವಾರಕಾಸ್ಥಃ ॥ 16 ॥**

**ಅನ್ವಯಾರ್ಥ :-** ಯಃ = ಯಾವ ಶ್ರೀಕೃಷ್ಣನು, ಅಥ=ಅನಂತರದಲ್ಲಿ, ಪ್ರಾಪ್ಯ । (ದ್ವಾರಕಾಮಿತಿಶೇಷಃ) = ದ್ವಾರಕಾಪುರವನ್ನು ಹೊಂದಿ, ಸತ್ರಾಜಿದಹಿತವಧಕೃತ್ = ಸತ್ರಾಜಿತ್ = ಸತ್ರಾಜಿತರಾಜನ, ಅಹಿತ = ಶತ್ರುವಾದ ಶತಧನ್ವನನ್ನು, ವಧಕೃತ್ = ಸಂಹರಿಸಿದವನಾಗಿ, ಶ್ವಫಲ್ಕಸ್ಯ = ಶ್ವಫಲ್ಕನೆಂಬ ಹೆಸರಿನ ಯಾದವನ ಸೂನೌ (ವಿದ್ಯಮಾನ ಮಿತಿಶೇಷಃ) = ಮಗನಾದ ಅಕ್ರೂರನಲ್ಲಿರುವ, ರತ್ನಂ = ಸ್ಯಮಂತಕ ಮಣಿಯನ್ನು, ಸಂದರ್ಶ್ಯ = ತೋರಿಸಿ, ರಾಮಂ = ಬಲರಾಮನನ್ನು, ಗತರುಷು = ಕೋಪರಹಿತನನ್ನಾಗಿ, ವ್ಯಧಿತ = ಮಾಡಿದನು. ಇಂದ್ರಪ್ರಸ್ಥಪಾರ್ಥಾನ್ = ಇಂದ್ರಪ್ರಸ್ಥವೆಂಬ ನಗರದಲ್ಲಿದ್ದ ಕುಂತೀಪುತ್ರರನ್ನು, ದ್ರಷ್ಟುಕಾಮಃ = ನೋಡಲಿಚ್ಛಿಸಿ, ಪ್ರತಸ್ಥೇ = ಹೋದನು. ಅಥ = ಅನಂತರ, ಸಹವಿಜಯಃ

= ಅರ್ಜುನ ಸಹಿತವಾಗಿ, ಯಾಮುನಂ ತೀರಂ = ಯಮುನಾನದೀ ತೀರಕ್ಕೆ, ಆಯನ್ = ಬಂದು, ತತ್ರ = ಯಮುನಾನದೀ ತೀರದಲ್ಲಿ, ಕಾಳಿಂದೀನಾಮಕಸ್ತ್ರೀಯನ್ನು, ಲಬ್ಧ್ವಾ = ಹೊಂದಿ. ಯಮಸುತ ಪುರಕೃತ್, ಯಮಸುತ = ಧರ್ಮರಾಜನ, ಪುರ = ಇಂದ್ರಪ್ರಸ್ಥ ನಗರವನ್ನು, ಕೃತ್ = ನಿರ್ಮಾಣಮಾಡಿಸಿ, ದ್ವಾರಕಾಸ್ಥಃ = ದ್ವಾರಕಾಪುರಿಗೆ ಬಂದಂಥ, ಕೃಷ್ಣಃ = ಶ್ರೀಕೃಷ್ಣನು, ಮಾಂ = ನನ್ನನ್ನು, ಪಾತು = ಕಾಪಾಡಲಿ,

**ವಿಗ್ರಹವಾಕ್ಯ :-** ಸತ್ರಾಜಿತಃ ಅಹಿತಃ – ಸತ್ರಾಜಿದಹಿತಃ, ತಸ್ಯವಧಃ– ಸತ್ರಾಜಿದಹಿತವಧಃ ತಂ ಕರೋತೀತಿ – ಸತ್ರಾಜಿದಹಿತವಧಕೃತ್ । ಗತಾ ರುಟ್ ಯಸ್ಯ ಸಃ ಗತರುಟ್, ತಂ ಗತರುಷಮ್ । ದ್ರಷ್ಟುಂ ಕಾಮೋ ಯಸ್ಯ ಸಃ ದ್ರಷ್ಟು-ಕಾಮಃ । ಇಂದ್ರಪ್ರಸ್ಥೇ ತಿಷ್ಠಂತೀತಿ – ಇಂದ್ರಪ್ರಸ್ಥಸ್ಥಾಃ – ತೇ ಚ ತೇ ಪಾರ್ಥಾಶ್ಚ ಇಂದ್ರಪ್ರಸ್ಥಸ್ಥಪಾರ್ಥಾಃ – ತಾನ್ ಇಂದ್ರಪ್ರಸ್ಥಸ್ಥಪಾರ್ಥಾನ್ । ವಿಜಯೇನ ಸಹಿತಃ ಸಹವಿಜಯಃ । ಯಮುನಾಯಾಃ ಸಂಬಂಧಿ ಯಾಮುನಮ್ । ದ್ವಾರಕಾಯಾಂ ತಿಷ್ಠತಿ ಇತಿ ದ್ವಾರಕಾಸ್ಥಃ ॥

**ತಾತ್ಪರ್ಯ:** ಶ್ರೀಕೃಷ್ಣನು ಪಾಂಚಾಲನಗರದಲ್ಲಿ ಪಾಂಡವರನ್ನು ಕಂಡು ಕುಶಲ ಪ್ರಶ್ನೆಮಾಡಿ ಅಲ್ಲಿಂದ ದ್ವಾರಕಾಪುರಿಗೆ ಬಂದು ಸತ್ತಾಜಿದ್ರಾಜನನ್ನು ವಧಿಸಿ ಸ್ಯಮಂತಕವನ್ನು ಅಪಹರಿಸಿದ ಶತಧನ್ವನನ್ನು ಸಂಹರಿಸಲು ವಿಚಾರಮಾಡಿ, ಶತಧನ್ವನು ಭಯದಿಂದ ಸ್ಯಮಂತಕ ಮಣಿಯನ್ನು ಅಕ್ರೂರನಿಗೆ ಕೊಟ್ಟು ಕುದುರೆಯನ್ನೇರಿ ನೂರು ಯೋಜನ ದೂರ ಓಡಿಹೋದನೆಂಬ ವಿಚಾರ ತಿಳಿದು ಬಲರಾಮನೊಡನೆ ರಥವನ್ನೇರಿ ವೇಗವಾಗಿ ಪ್ರಯಾಣಬೆಳೆಸಿ, ಮಿಥಿಲಾನಗರದ ಉಪವನದಲ್ಲಿ ಶತಧನ್ವನನ್ನು ಸಂಧಿಸಿ ಚಕ್ರದಿಂದ ಅವನ ಶಿರವನ್ನು ಛೇದಿಸಿ, ಅವನಲ್ಲಿ ಸ್ಯಮಂತಕ ಮಣಿಯು ಇಲ್ಲದಿರುವುದನ್ನು ಮನಗಂಡು ಅದನ್ನು ಬಲರಾಮನಗೆ ತಿಳಿಸಲು, ಬಲರಾಮನು ''ಶ್ರೀಕೃಷ್ಣನು ಮಣಿಯನ್ನು ತಾನೇ ತೆಗೆದುಕೊಂಡು ಸುಳ್ಳು ಹೇಳುತ್ತಿದ್ದಾನೆಂದು'' ಬಗೆದು ಅಸಮಾಧಾನದಿಂದ ಮಿಥಿಲಾ ನಗರಕ್ಕೆ ಹೋಗುವುದಾಗಿ ನುಡಿಯಲು ಅಣ್ಣನನ್ನು ಬೀಳ್ಕೊಟ್ಟು ದ್ವಾರಕಾನಗರಿಗೆ ಬಂದು ಸಮಸ್ತವಿಚಾರಗಳನ್ನೂ ಸತ್ಯಭಾಮೆಗೆ ತಿಳಿಸಿ, ಶ್ರೀಕೃಷ್ಣನು ಅವಳ ತಂದೆಯ ಔರ್ಧ್ವದೈಹಿಕ ಕರ್ಮಗಳನ್ನು ಮಾಡಿಸಿದನು. ಅಕ್ರೂರನು ದ್ವಾರಕೆಯಲ್ಲಿಲ್ಲದಿದ್ದುದರ ಪರಿಣಾಮವಾಗಿ ನಾನಾವಿಧ ರೋಗಗಳಿಂದ ಪೀಡಿತರಾದ ಸ್ವಜನರು ಅಕ್ರೂರನನ್ನು ಕರೆಯಿಸಬೇಕೆಂದು ಪ್ರಾರ್ಥಿಸಲು, ಶತಧನ್ವನನ್ನು ಸಂಹರಿಸಿದ ವಿಚಾರವರಿತು, ತನ್ನಲ್ಲಿ ಮಣಿ ಇರುವುದು ಗೊತ್ತಾದರೆ, ಕೃಷ್ಣನು ತನ್ನನ್ನೂ ವಧಿಸಬಹುದೆಂಬ ಭಯದಿಂದ ದೇಶಾಂತರಗತನಾದ ಅಕ್ರೂರನನ್ನೂ, ಬಲ ರಾಮನನ್ನೂ ಹುಡುಕಿ ದ್ವಾರಕೆಗೆ ಕರೆತಂದು ಸಭೆಯಲ್ಲಿ ಅಕ್ರೂರನಲ್ಲಿರುವ ಸ್ಯಮಂತಕ ಮಣಿಯನ್ನು ಬಲರಾಮನಿಗೆ ತೋರಿಸಿ ಸಮಸ್ತವಿಚಾರಗಳನ್ನೂ ವಿಶದಪಡಿಸಿ ಬಲರಾಮನನ್ನು ಸಮಾ-ಧಾನಪಡಿಸಿ ಬಂಧುಜನರ ವ್ಯಾಧಿಯನ್ನು ಪರಿಹರಿಸಿ ಸ್ಯಮಂತಕ ಮಣಿಯನ್ನು ಮತ್ತೆ ಅಕ್ರೂರನಿಗೆ ದಯಪಾಲಿಸಿದನು.

ಒಂದುಸಲ ಶ್ರೀಕೃಷ್ಣನು ಪಾಂಡವರನ್ನು ನೋಡಲಾಶಿಸಿ ಬಲಭದ್ರನೊಡನೆ ಇಂದ್ರಪ್ರಸ್ಥಪುರಕ್ಕೆ ಬಂದು ಪಾಂಡವರಿಂದ ಪೂಜಿತನಾಗಿ, ಅವರನ್ನು ಸಂತೋಷಪಡಿಸಲು ವರ್ಷಾಕಾಲದಲ್ಲಿ ಅವರಲ್ಲಿಯೇ ವಾಸಮಾಡಿದನು. ಒಂದು ದಿನ ಅರ್ಜುನ ಸಹಿತನಾಗಿ ಶ್ರೀಕೃಷ್ಣನು ಬೇಟೆಯಾಡಲು ಯಮುನಾತೀರಕ್ಕೆ ಬಂದನು. ಅಲ್ಲಿ ಶ್ರೀಕೃಷ್ಣನನ್ನೇ ಪತಿಯಾಗಿ ಪಡೆಯಬೇಕೆಂದು ತಪಸ್ಸು ಮಾಡುತಿತಿದ್ದ ಸೂರ್ಯ ಪುತ್ರಿಯಾದ ಕಾಲಿಂದೀ ಎಂಬ ಕನ್ಯೆಯನ್ನು (ಸ್ತ್ರೀಯನ್ನು) ಪಡೆದು ವಿಶ್ವಕರ್ಮನನ್ನು (ಶಿಲ್ಪಿ)ಕರೆದು ಧರ್ಮರಾಜನಗಾಗಿ ಅತ್ಯಂತ ವಿಸ್ತಾರವಾಗಿ ಇಂದ್ರಪ್ರಸ್ಥಪುರವನ್ನು ನರ್ಮಾಣ ಮಾಡಿಸಿದನು. ಅನಂತರ ಪಾಂಡವರಿಂದ ಬೀಳ್ಕೊಂಡು ಸ್ವಜನರೊಡನೆ ದ್ವಾರಕಾಪುರಕ್ಕೆ ಬಂದು ಕಾಲಿಂದಿಯನ್ನು ವೈದಿಕ ವಿಧಿಪೂರ್ವಕವಾಗಿ ವಿವಾಹವಾಗಿ ಅವಳೊಡನೆ ರಮಿಸುತ್ತಾ ಸರ್ವರನ್ನೂ ಸಂತೋಷಪಡಿಸಿದನು ಮುಂತಾದ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುವುದು. ಇಂತು ಮಹಾಮಹಿಮೆಯನ್ನು ತೋರಿದ ಶ್ರೀಕೃಷ್ಣನು ನನ್ನನ್ನು ಕಾಪಾಡಲಿ ಎಂದು ಭಾವ.

**ಅಲಂಕಾರ:-** ಇಲ್ಲಿ ಸ್ಯಮಂತಕ ಮಣಿಯ ವ್ಯಾಜ್ಯದಿಂದ ಮತ್ತು ವಿಶ್ವಕರ್ಮನಿಂದ ಪಾಂಡವರಿಗಾಗಿ ಇಂದ್ರಪ್ರಸ್ಥ-ಪುರಿಯನ್ನು ನಿರ್ಮಿಸಿದ ನಿಪುಣತೆಯಿಂದ, ಸೂರ್ಯಪುತ್ರಿಯಾದ ಕಾಲಿಂದಿಯನ್ನು ವಿವಾಹವಾಗಿ ಸರ್ವರನ್ನು ಸಂತೋಷ-ಗೊಳಿಸಿದ ವಿಚಾರ ನಿರೂಪಣ ಇತ್ಯಾದಿ ಶ್ರೀಕೃಷ್ಣನ ಚರಿತ್ರೆಯ ಉತ್ತರೋತ್ತರ ಉತ್ಕರ್ಷವನ್ನು ವರ್ಣಿಸಿರುವುದರಿಂದ ಇಲ್ಲಿಯೂ ಸಾರಾಲಂಕಾರವಿದೆ. ಲಕ್ಷಣ ಹಿಂದೆಯೇ ಹೇಳಿದೆ.

ಇಲ್ಲಿ ವ್ಯಧಿತ, ಪ್ರತಸ್ಥೇ ಮತ್ತು ಪಾತು ಎಂಬ ಮೂರು ಕ್ರಿಯಾಪದಗಳಿವೆ. ''ವಿ'' ಉಪಸರ್ಗಪೂರ್ವಕ ಡುಧಾಞ್ ಧಾರಣಪೋಷಣಯೋಃ ಎಂಬ ಧಾತುವಿನ ಸಕರ್ಮಕ ಕರ್ತರಿ ಲುಙ ಆತ್ಮನೇಪದಿ ಪ್ರಥಮಪುರುಷ ಏಕವಚನದಲ್ಲಿ ವ್ಯಧಿತ ಎಂದಾಗಿದೆ.

| **ರೂಪ :-** | ವ್ಯಧಿತ | ವ್ಯಧಿಷಾತಾಂ | ವ್ಯಧಿಷತ |
|---|---|---|---|
| | ವ್ಯಧಿಥಾಃ | ವ್ಯಧಿಷಾಥಾಂ | ವ್ಯಧಿಧ್ವಂ |
| | ವ್ಯಧಿಷಿ | ವ್ಯಧಿಷ್ವಹಿ | ವ್ಯಧಿಷ್ಮಹಿ ॥ |

''ಪ್ರ'' ಉಪಸರ್ಗಪೂರ್ವಕ ''ಷ್ಠಾಗತಿನವೃತ್ತಾ'' ಎಂಬ ಧಾತುವಿನ ಆಕರ್ಮಕ ಕರ್ತರಿ ಲಿಟ್ ಆತ್ಮನೇಪದಿ ಪ್ರಥಮ-ಪುರುಷ ಏಕವಚನದಲ್ಲಿ ಪ್ರತಸ್ಥೇ ಎಂದಾಗಿದೆ.

| **ರೂಪ :-** | ಪ್ರತಸ್ಥೇ | ಪ್ರತಸ್ಥಾತೇ | ಪ್ರತಸ್ಥಿರೇ |
|---|---|---|---|
| | ಪ್ರತಸ್ಥಿಷೇ | ಪ್ರತಸ್ಥಾಥೇ | ಪ್ರತಸ್ಥಿಧ್ವೇ |
| | ಪ್ರತಸ್ಥೇ | ಪ್ರತಸ್ಥಿವಹೇ | ಪ್ರತಸ್ಥಿಮಹೇ ॥ |

''ಪಾತು'' ಎಂಬುದರ ರೂಪ ಧಾತ್ವರ್ಥ ಮುಂತಾದುವನ್ನು ಹಿಂದೆಯೇ ಕೊಟ್ಟಿದೆ.

**ಯೋ ಜಹ್ರೇ ಮಿತ್ರವಿಂದಾಮಥ ದೃಢವೃಷಭಾನ್ ಸಪ್ತ ಬದ್ಧ್ವಾಥ ನೀಲಾಂ**
**ಭದ್ರಾಂ ಮದ್ರೇಶಪುತ್ರೀಮಪಿ ಪರಿಜಗೃಹೇ ಶಕ್ರವಿಜ್ಞಾಪಿತಾರ್ಥಃ ।**
**ತಾರ್ಕ್ಷ್ಯಾರೂಢಸ್ಸಭಾರ್ಯೋ ಹಿಮಗಿರಿಶಿಖರೇ ಭೌಮದುರ್ಗಂ ಸಮೇತ್ಯ**
**ಛಿತ್ವಾ ದುರ್ಗಾಣಿ ಕೃಂತ್ವಾ ಮುರಗಲಮರಿಣಾ ದೇವತೇಡ್ಯಸ್ಸ ಮಾऽವ್ಯಾತ್ ॥ 17 ॥**

**ಅನ್ವಯಾರ್ಥ:-** ಯಃ = ಯಾವ ಶ್ರೀಕೃಷ್ಣನು, ಮಿತ್ರವಿಂದಾಂ = ಮಿತ್ರವಿಂದೆಯೆಂಬ ಕನ್ಯೆಯನ್ನು, ಜಹ್ರೇ = ಹೊಂದಿದನು. ಅಥ = ಅನಂತರದಲ್ಲಿ, ಸಪ್ತ = ಸಪ್ತಸಂಖ್ಯಾತವಾದ, ದೃಢವೃಷಭಾನ್ = ದೃಢ = ಬಲಿಷ್ಠವಾದ, ವೃಷಭಾನ್ = ಹೋರಿ (ಎತ್ತು) ಗಳನ್ನು, ಬಧ್ವಾ = ಪಾಶಗಳಿಂದ ಬಂಧಿಸಿ, ನೀಲಾಮಪಿ = ನೀಲೆಯನ್ನೂ ಸಹ, ಜಹ್ರೇ=ಅಪಹರಿಸಿದನು. ಭದ್ರಾಂ=ಭದ್ರೆ ಎಂಬುವವಳನ್ನೂ, ಜಹ್ರೇ = ಹೊಂದಿದನು. ಮದ್ರೇಶಪುತ್ರೀಂ(ಕನ್ಯಾ)ಮಪಿ = ಮದ್ರದೇಶಾಧಿಪತಿಯ ಪುತ್ರಿಯಾದ ಲಕ್ಷಣಾ ಎಂಬುವಳನ್ನೂ, ಪರಿಜಗೃಹೇ=ಪರಿಗ್ರಹಿಸಿದನು. ಶಕ್ರವಿಜ್ಞಾಪಿತಾರ್ಥಃ, ಶಕ್ರ = ಇಂದ್ರನಿಂದ, ವಿಜ್ಞಾಪಿತ = ಪ್ರಾರ್ಥಿಸಲ್ಪಟ್ಟ, ಅರ್ಥಃ = ಪ್ರಯೋಜನವುಳ್ಳವನಾಗಿ, ತಾರ್ಕ್ಷ್ಯಾರೂಢಃ = ಗರುಡಾರೂಢನಾಗಿ, ಸಭಾರ್ಯಃ = ಪತ್ನಿಯಾದ ಸತ್ಯಭಾಮಾಸಹಿತನಾಗಿ, ಹಿಮಗಿರಿ ಶಿಖರೇ-ಹಿಮಗಿರಿ = ಹಿಮವತ್ಪರ್ವತದ, ಶಿಖರೇ = ಮೇಲಿನ ಪ್ರದೇಶದಲ್ಲಿ, ಭೌಮದುರ್ಗಂ = ಭೂದೇವಿಯ ಮಗನಾದ ನರಕಾಸುರನ ಪಟ್ಟಣವನ್ನು (ದುರ್ಗ = ಕೋಟೆಯನ್ನು),

ಸಮೇತ್ಯ= ಹೊಂದಿ, ದುರ್ಗಾಣಿ = ಗಿರಿ (ಗಿರಿದುರ್ಗ, ಜಲದುರ್ಗ ಅಗ್ನಿದುರ್ಗ, ಮುರಪಾಶ ದುರ್ಗ) ದುರ್ಗಾದಿಗಳನ್ನು, ಛಿತ್ವಾ = ಛೇದಿಸಿ, ಮುರಗಲಂ = ಮುರ = ಮುರನೆಂಬ ಅಸುರನ, ಗಲಂ = ಕತ್ತನ್ನು, ಅರಿಣಾ = ಚಕ್ರದಿಂದ, ಕೃತ್ವಾ = ಛೇದಿಸಿ, ದೇವತೇಡ್ಯಃ = ದೇವತೆಗಳಿಂದ ಸ್ತುತ್ಯನಾದನು. ಸಃ = ಶ್ರೀಕೃಷ್ಣನು, ಮಾಂ = ನನ್ನನ್ನು, ಅವ್ಯಾತ್ = ರಕ್ಷಿಸಲಿ.

**ವಿಗ್ರಹವಾಕ್ಯ :-** ದೃಢಾಶ್ಚ ತೇ ವೃಷಭಾಶ್ಚ- ದೃಢವೃಷಭಾಃ ತಾನ್ । ಮದ್ರಸ್ಯ ಈಶಃ ಮದ್ರೇಶಃ, ಮದ್ರೇಶಸ್ಯ ಪುತ್ರೀ, ಮದ್ರೇಶಪುತ್ರೀ ತಾಮ್ । ಶಕ್ರೇಣ ವಿಜ್ಞಾಪಿತಾಃ ಶಕ್ರವಿಜ್ಞಾಪಿತಾಃ, ಶಕ್ರವಿಜ್ಞಾಪಿತಾಃ ಅರ್ಥಾಃ ಯಸ್ಯಸಃ ಶಕ್ರವಿಜ್ಞಾ-ಪಿತಾರ್ಥಃ । ತಾರ್ಕ್ಷ್ಯೇ ಆರೂಢಃ- ತಾರ್ಕ್ಷ್ಯಾರೂಢಃ । ಹಿಮಸ್ಯ ಗಿರಿಃ ಹಿಮಗಿರಿಃ, ಹಿಮಗಿರೇಃ ಶಿಖರಂ ಹಿಮಗಿರಿಶಿಖರಂ, ತಸ್ಮಿನ್ । ಭೂಮೇಃ ಅಪತ್ಯಂ ಪುಮಾನ್ ಭೌಮಃ, ಭೌಮಸ್ಯ ದುರ್ಗಂ ಭೌಮದುರ್ಗಂ ತತ್ । ಮುರಸ್ಯ ಗಲಃ ಮುರಗಲಃ, ತಂ ಮುರಗಲಮ್ । ದೇವತಾಭಿಃ ಈಡ್ಯಃ ದೇವತೇಡ್ಯಃ ॥

**ತಾತ್ಪರ್ಯ:-** ಕಾಲಿಂದಿಯ ವಿವಾಹದ ನಂತರ ಶ್ರೀ ಕೃಷ್ಣನು ಸೋದರತ್ತೆಯ ಮಗಳಾದ ಮಿತ್ರವಿಂದೆಯನ್ನು ಸ್ವಯಂವರಕಾಲದಲ್ಲಿ ಬಲಾತ್ಕಾರದಿಂದ ಅಪಹರಿಸಿ ಸಕಲ ಭೂಪಾಲರನ್ನು ತಿರಸ್ಕರಿಸಿ, ಮಿತ್ರವಿಂದೆಯೊಡನೆ ನಗ್ನಜಿತ್ ಎಂಬ ರಾಜನ ಪಟ್ಟಣಕ್ಕೆ ಬಂದು ಅವನಿಂದ ಪೂಜಿತನಾದನು. ನಗ್ನಜಿತ್ ರಾಜನು ತನ್ನ ಮಗಳನ್ನು ವಿವಾಹವಾಗಲು ಬಯಸಿ ಬರುವ ವರರ ಪರೀಕ್ಷೆಗಾಗಿ ತೀಕ್ಷ್ಣಶೃಂಗ (ಕೊಂಬು)ಗಳನ್ನುಳ್ಳ ಅತ್ಯಂತ ಬಲಿಷ್ಠವಾದ ಏಳು ವೃಷಭಗಳನ್ನು ಸಂಪಾದಿಸಿಟ್ಟಿದ್ದನು.ಮತ್ತು ತನ್ನ ಮಗಳನ್ನು ವಿವಾಹವಾಗಬಯಸುವವರು ನಿರಾಯುಧರಾಗಿ ಆ ಏಳು ವೃಷಭಗಳನ್ನು ಏಕಕಾಲದಲ್ಲಿ ಬಂಧಿಸಬೇಕೆಂಬ ಪಣವಿಟ್ಟಿದ್ದನು. ಶ್ರೀಕೃಷ್ಣನು ಆ ವಿಷಯವನ್ನರಿತು ಏಕಕಾಲದಲ್ಲಿ ಏಳು ರೂಪಗಳನ್ನು ಧರಿಸಿ ಆ ಏಳು ವೃಷಭಗಳನ್ನೂ ಪಾಶದಿಂದ ಬಂಧಿಸಿದನು. ಶ್ರೀಕೃಷ್ಣನ ಅಮಿತಪರಾಕ್ರಮವನ್ನು ಕಂಡು ಮುದಗೊಂಡು ನಗ್ನಜಿದ್ರಾಜನು ತನ್ನ ಮಗಳಾದ ನೀಲಾ ಎಂಬ ಕನ್ಯೆಯ ಪಾಣಿಗ್ರಹಣ ಮಾಡಬೇಕೆಂದು ಪ್ರಾರ್ಥಿಸಿದಂತೆ ನೀಲಾ ಎಂಬ ರಾಜಕುಮಾರಿಯನ್ನು ಲಗ್ನವಾಗಿ ಅಲ್ಲಿಂದ ಕೇಕಯ ದೇಶಕ್ಕೆ ಬಂದು ಅಲ್ಲಿನ ರಾಜನಾದ ಶ್ರುತಕೀರ್ತಿಯ ಪುತ್ರಿಯಾದ ಭದ್ರಾ ಎಂಬ ಕನ್ಯೆಯನ್ನು ವಿವಾಹ ವಿಧಿಯಿಂದ ಪರಿಗ್ರಹಿಸಿ ಅಲ್ಲಿಂದ ಮದ್ರದೇಶಕ್ಕೆ ಬಂದು ಮದ್ರಾದೇಶಾಧಿಪತಿಯ ಮಗಳಾದ ಸುಲಕ್ಷಣಗಳಿಂದ ಕೂಡಿದ ಲಕ್ಷಣಾ ಎಂಬ ಕನ್ಯೆಯನ್ನು ಸ್ವಯಂವರದಲ್ಲಿ ಲಕ್ಷ್ಯವೇಧವನ್ನು ಮಾಡಿ ವಿವಾದವಾಗಿ ದ್ವಾರಕೆಗೆ ಆಗಮಿಸಿದನು.

ಅದೇ ಸಂದರ್ಭದಲ್ಲಿ ಇಂದ್ರದೇವರು ಶ್ರೀಕೃಷ್ಣನ ಸನ್ನಿಧಿಗೆ ಬಂದು ನರಕಾಸುರನಿಂದ ತನಗೂ ದೇವತೆಗಳಿಗೂ ಆಗುತ್ತಿರುವ ಪೀಡೆಯನ್ನು ನಿವೇದಿಸಿ, ನರಕಾಸುರನನ್ನು ಸಂಹರಿಸಿ ಅನುಗ್ರಹಿಸಬೇಕೆಂದು ಪ್ರಾರ್ಥಿಸಲು ಇಂದ್ರನಿಗೆ ಅಭಯವಿತ್ತು ಅವನನ್ನು ಕಳುಹಿಸಿಕೊಟ್ಟನು. ಅದೇ ಸಮಯದಲ್ಲಿ ದೇವಲೋಕದಿಂದ ಬಂದ ನಾರದರು ಸಭೆಯಲ್ಲಿ ಶ್ರೀಕೃಷ್ಣನಿಗೆ ದೇವಲೋಕದ ಪಾರಿಜಾತ ಪುಷ್ಪವನ್ನು ಸಮರ್ಪಿಸಲು ಅದನ್ನು ರುಕ್ಮಿಣೀದೇವಿಗೆ ಕೊಟ್ಟನು. ಇದರಿಂದ ಕುಪಿತಳಾದ ಸತ್ಯಭಾಮೆಯ ಕೋಪಶಾಂತ್ಯರ್ಥವಾಗಿ ಪಾರಿಜಾತ ವೃಕ್ಷವನ್ನೇ ತಂದುಕೊಡುವುದಾಗಿ ಹೇಳಿ ಸತ್ಯಭಾಮೆಯೊಡನೆ ಗರುಡಾರೂಢನಾಗಿ ಹಿಮಗಿರಿ ಶಿಖರದಲ್ಲಿರುವ ಗಿರಿದುರ್ಗ, ಜಲದುರ್ಗ, ಅಗ್ನಿದುರ್ಗ, ಮುರಪಾಶದುರ್ಗಗಳಿಂದ ಆವೃತವಾದ ಪ್ರಾಗ್ಜ್ಯೋತಿಷಪುರವೆಂಬ ಭೂಮಿಸುತನರಕಾಸುರನ ಪಟ್ಟಣಕ್ಕೆ ಬಂದು, ಗಿರಿದುರ್ಗವನ್ನು ಗದೆಯಿಂದ ಭೇದಿಸಿ, ಜಲದುರ್ಗವನ್ನು ವಾಯುವಿನಿಂದ ಶೋಷಿಸಿ, ವರುಣಾಸ್ತ್ರದಿಂದ ಅಗ್ನಿದುರ್ಗವನ್ನು ನಾಶಪಡಿಸಿ, ಮುರಪಾಶದುರ್ಗವನ್ನು ಖಡ್ಗದಿಂದ ಛೇದಿಸಿ ಪಟ್ಟಣದೊಳಗೆ ಪ್ರವೇಶಮಾಡಿ ತನ್ನೊಡನೆ ಯುದ್ಧಕ್ಕಾಗಿ ಬಂದ ನರಕಾಸುರನ ಮಂತ್ರಿಯಾದ ಪಂಚಮುಖಗಳಿಂದ ಯುಕ್ತನಾದ ಮುರನೆಂಬ ದೈತ್ಯನನ್ನು ನಿರಾಯುಧನನ್ನಾಗಿ ಮಾಡಿ, ಅವನ ಐದು ತಲೆಗಳನ್ನು ಚಕ್ರದಿಂದ ಛೇದಿಸಿ ದೇವತೆಗಳಿಂದ ಪುಷ್ಪವೃಷ್ಟಿ ಮಾಡಿಸಿಕೊಂಡು ಸರ್ವರನ್ನೂ ಆನಂದಗೊಳಿಸಿದನು,

ಮುಂತಾದ ಕಥೆಯು ಈ ಪದ್ಯದಿಂದ ಸೂಚಿತವಾಗುತ್ತಿದೆ. ಅಂಥ ಮಹಾಮಹಿಮನಾದ ಶ್ರೀ ಕೃಷ್ಣನು ನನ್ನನ್ನು ಕಾಪಾಡಲಿ ಎಂದು ಭಾವ.

**ಅಲಂಕಾರ:-** ಇಲ್ಲಿ ಇತರರಿಗೆ ಅಸಂಭಾವಿತವಾದ (ಅಸಾಧ್ಯವಾದ) ಏಳು ರೂಪಗಳನ್ನು ಧರಿಸಿ ಏಳು ವೃಷಭಗಳನ್ನು ಏಕಕಾಲದಲ್ಲಿ ಬಂಧಿಸಿದ ಶ್ರೀಕೃಷ್ಣಚರಿತ್ರೆಯನ್ನು ವರ್ಣಿಸಿರುವುದರಿಂದ ಅಸಂಭವಾಲಂಕಾರವೂ ಮತ್ತು ಮಿತ್ರವಿಂದಾ, ನೀಲಾ, ಭದ್ರಾ, ಲಕ್ಷಣಾ ಮುಂತಾದ ರಾಜಪುತ್ರಿಯರೊಡನೆ ವಿವಾಹಿತನಾಗಿ ನರಕಾಸುರನ ಪಟ್ಟಣಕ್ಕೆ ಬಂದು ಅವನ ಗಿರಿದುರ್ಗ, ಜಲದುರ್ಗ, ವಾಯುದುರ್ಗ, ಅಗ್ನಿದುರ್ಗ, ಮುರಪಾಶದುರ್ಗ ಮುಂತಾದ ದುರ್ಗಗಳನ್ನು ನಾಶಪಡಿಸಿ, ನರಕನ ಮಂತ್ರಿಯಾದ ಮರಾಸುರನನ್ನು ಸಂಹರಿಸಿದ ಚರಿತ್ರೆ ಉತ್ತರೋತ್ತರ ಉತ್ಕರ್ಷಪೂರ್ವಕ ವರ್ಣಿತವಾಗಿರುವು-ದರಿಂದ ''ಸಾರಾಲಂಕಾರ''ವೂ ಇದೆ. ಲಕ್ಷಣಗಳು ಹಿಂದೆಯೇ ಹೇಳಲ್ಪಟ್ಟಿವೆ.

ಇಲ್ಲಿ ''ಜಹ್ರೇ'' ''ಪರಿಜಗೃಹೇ'' ಮತ್ತು ''ಅವ್ಯಾತ್'' ಎಂಬ ಮೂರು ಕ್ರಿಯಾಪದಗಳಿವೆ.

''ಹೃಞ್-ಹರಣೇ'' ಎಂಬ ಧಾತುವಿನ ಸಕರ್ಮಕ ಕರ್ತರಿ ಆತ್ಮನೇಪದಿ ಪ್ರಥಮ ಪುರುಷ ಏಕವಚನದಲ್ಲಿ ಜಹ್ರೇ ಎಂದಾಗಿದೆ.

| | | | |
|---|---|---|---|
| **ರೂಪ :-** | ಜಹ್ರೇ | ಜಹ್ರಾತೇ | ಜಹ್ರಿರೇ |
| | ಜಹ್ರಿಷೇ | ಜಹ್ರಾಥೇ | ಜಹ್ರಿಧ್ವೇ |
| | ಜಹ್ರೇ | ಜಹ್ರಿವಹೇ | ಜಹ್ರಿಮಹೇ ॥ |

''ಜಗೃಹೇ'' , ''ಅವ್ಯಾತ್'' ಇವೆರಡರ ಕಾಲ ಪುರುಷ-ವಚನ-ರೂಪಗಳನ್ನೂ, ಧಾತ್ವರ್ಥವನ್ನೂ ಹಿಂದೆಯೇ ಕೊಡಲಾಗಿದೆ.

**ತ್ರಿಂಶತ್ಪಂಚಾವಧೀದ್ಯೋ ಸಚಿವವರಸುತಾನ್ ಭೂಮಿಜೇನಾತಿಘೋರಂ**
**ಯುದ್ಧಂ ಕೃತ್ವಾ ಗಜಾದ್ಯೈರರಿಹೃತಶಿರಸಂ ತಂ ವ್ಯಧಾದ್ಭೂಸ್ತುತೋಽಥ ।**
**ಕೃತ್ವಾ ರಾಜ್ಯೇಽಸ್ಯ ಸೂನುಂ ವರಯುವತಿಜನಾನ್ ಭೂರಿಶಶ್ಚಾರುವೇಷಾನ್**
**ಪ್ರಾಪಯ್ಯ ದ್ವಾರಕಾಂ ಸೋಽಕೃತ ಮುದಮದಿತೇಃ ಕುಂಡಲಾಭ್ಯಾಮವೇನ್ಮಾಮ್ ॥ 18 ॥**

**ಅನ್ವಯಾರ್ಥ:-** ಯಃ=ಯಾವ ಕೃಷ್ಣನು, ತ್ರಿಂಶತ್ಪಂಚ=ಮೂವತ್ತೈದು ಜನ ಸಚಿವವರಸುತಾನ್-ಸಚಿವ=ಮಂತ್ರಿಗಳ, ವರ=ಶ್ರೇಷ್ಠರಾದ, ಸುತಾನ್=ಪುತ್ರರನ್ನು, ಅವಧೀತ್=ಸಂಹರಿಸಿದನೋ, ಗಜಾದ್ಯೈಃ=ಆನೆ ಕುದುರೆ ಮುಂತಾದವುಗಳಿಂದ ಯುಕ್ತನಾದ ಭೂಮಿಜೇನ=ಭೂದೇವಿಯ ಮಗನಾದ ನರಕಾಸುರನೊಡನೆ, ಅತಿಘೋರಂ=ಭಯಂಕರವಾದ, ಯುದ್ಧಂ=ಕದನವನ್ನು, ಕೃತ್ವಾ =ಮಾಡಿ, ತಂ=ನರಕಾಸುರನನ್ನು, ಅರಿಹೃತಶಿರಸಂ-ಅರಿ=ಚಕ್ರದಿಂದ, ಹೃತ=ಅಪಹರಿಸಲ್ಪಟ್ಟ ಶಿರಸಂ=ಶಿರವುಳ್ಳವನನ್ನಾಗಿ, ವ್ಯಧಾತ್=ಮಾಡಿದನೋ, ಅಥ=ಆನಂತರ, ಭೂಸ್ತುತಃ=ಭೂಮಿಗೆ, ಅಭಿಮಾನಿನಿಯಾದ ಧರಾದೇವಿಯಿಂದ ಸ್ತುತ್ಯನಾಗಿ, ಅಸ್ಯ= ನರಕಾಸುರನ, ಸೂನುಂ=ಪುತ್ರನಾದ ಭಗದತ್ತನನ್ನು, ರಾಜ್ಯೇ=ಪ್ರಾಗ್ಜ್ಯೋತಿಷ ಪುರ ರಾಜ್ಯಾಧಿಪತ್ಯದಲ್ಲಿ, ಕೃತ್ವಾ=ಸ್ಥಾಪಿಸಿ (ಪಟ್ಟಾಭಿಷೇಕ ಮಾಡಿ), ಚಾರುವೇಷಾನ್=ಮನೋಹರ ಅಲಂಕಾರಯುಕ್ತರಾದ, ಭೂರಿಶಃ=ಅಧಿಕರಾದ, ವರಯುವತಿಜನಾನ್ - ವರ = ಶ್ರೇಷ್ಠರಾದ,ಯುವತಿಜನಾನ್ = ಯೌವನಸ್ಥರಾದ ಸ್ತ್ರೀಯರನ್ನು,

ದ್ವಾರಕಾಂ = ದ್ವಾರಕೆಗೆ, ಪ್ರಾಪಯ್ಯ = ಕರೆದೊಯ್ದು (ತಲುಪಿಸಿ) ಆದಿತೇಃ = ಇಂದ್ರನ ತಾಯಿಯಾದ ಅದಿತಿದೇವಿಗೆ, ಕುಂಡಲಾಭ್ಯಾಂ= ಕರ್ಣಕುಂಡಲಪ್ರದಾನದಿಂದ, ಮುದಂ=ಹರ್ಷವನ್ನು, ಅಕೃತ=ಉಂಟು ಮಾಡಿದನೋ, ಸಃ=ಅಂತಹ ಶ್ರೀಕೃಷ್ಣನು, ಮಾಂ=ನನ್ನನ್ನು, ಅವೇತ್=ರಕ್ಷಿಸಲಿ.

**ವಿಗ್ರಹವಾಕ್ಯ :-** ತ್ರಿಂಶದಧಿಕಾಃ ಪಂಚ – ತ್ರಿಂಶತ್ಪಂಚ । ವರಾಶ್ಚತೇ ಸುತಾಶ್ಚ ವರಸುತಾಃ, ಸಚಿವಾನಾಂ ವರಸುತಾಃ ಸಚಿವವರಸುತಾಃ, ತಾನ್ ಸಚಿವವರಸುತಾನ್ । ಗಜಃ ಆದ್ಯೋ ಯೇಷಾಂ ತೇ ಗಜಾದ್ಯಾಃ ತೈಃ ಗಜಾದ್ಯೈಃ । ಭೂಮ್ಯಾಂ ಜಾಯತ ಇತಿ ಭೂಮಿಜಃ ತೇನ ಭೂಮಿಜೇನ । ಅರಿಣಾಹೃತಂ ಶಿರಃ ಯಸ್ಯಸಃ ಅರಿಹೃತಶಿರಾಃ ತಂ ಅರಿಹೃತಶಿರಸಮ್ । ಭುವಾ ಸ್ತುತಃ ಭೂಸ್ತುತಃ । ಚಾರುಃ ವೇಷಃ ಯೇಷಾಂ ತೇ ಚಾರುವೇಷಾಃ ತಾನ್ ಚಾರುವೇಷಾನ್ । ಯುವತಯ ಇತಿ ಜನಾಃ ಯುವತಿಜನಾಃ, ವರಾಶ್ಚತೇ ಯುವತಿ ಜನಾಶ್ಚ ವರಯುವತಿಜನಾಃ, ತಾನ್ ವರಯುವತಿಜನಾನ್ ॥

**ತಾತ್ಪರ್ಯ:-** ಶ್ರೀಕೃಷ್ಣನು ಮುರವಧಾನಂತರ ಪೀಠ, ನಿಶುಂಭ, ಹಯಗ್ರೀವ ಪಂಚಜನರೆಂಬ ನರಕಾಸುರನ ಇತರ ನಾಲ್ಕು ಮಂತ್ರಿಗಳನ್ನು ಸಂಹರಿಸಿ, ಮುರ ಮುಂತಾದ ಐದು ಜನ ಮಂತ್ರಿಗಳ ಏಳೇಳು ಮಕ್ಕಳನ್ನೂ ಅಂದರೆ ಐದು ಜನ ಮಂತ್ರಿಗಳ ಮೂವತ್ತೈದು ಜನ ಪುತ್ರರನ್ನೂ ಸಂಹಾರಮಾಡಿದನು. ಇದರಿಂದ ಕೋಪಗೊಂಡು, ಪೃಥಿವ್ಯಭಿಮಾನಿನಿಯಾದ ಧರಾದೇವಿಯಲ್ಲಿ ವರಾಹರೂಪಿ ಶ್ರೀವಿಷ್ಣುವಿನಿಂದ ಉತ್ಪನ್ನನಾದ ಬ್ರಹ್ಮದೇವರ ವರದಿಂದ ಅವಧ್ಯನಾದ ನರಕಾಸುರನು ಗಜತುರಗಾದಿ ಮಹಾಸೈನ್ಯದಿಂದ ಕೂಡಿ ಕೃಷ್ಣನ ಮೇಲೆ ಯುದ್ಧಕ್ಕೆ ಬಂದನು. ಶ್ರೀಕೃಷ್ಣನು ಯುದ್ಧದಲ್ಲಿ ನರಕಾಸುರನ ಶಿರವನ್ನು ಚಕ್ರದಿಂದ ಕತ್ತರಿಸಿ, ಅವನನ್ನು ಸಂಹಾರ ಮಾಡಿದನು. ದೇವತೆಗಳು ಅಸುರನನ್ನು ಸಂಹರಿಸಿದ ಶ್ರೀಕೃಷ್ಣನ ಮೇಲೆ ಪೂಮಳೆಗರೆದರು. ಅನಂತರ ನರಕಾಸುರನ ತಾಯಿಯಾದ ಧರಾದೇವಿಯು ಕೃಷ್ಣನನ್ನು ಸ್ತುತಿಸಿ ಪೌತ್ರನಾದ ಭಗದತ್ತನಲ್ಲಿ ಅನುಗ್ರಹ ಮಾಡಬೇಕೆಂದು ಪ್ರಾರ್ಥಿಸಿದಳು.

ಹಿಂದೆ ನರಕಾಸುರನು ಕುಬೇರನ "ಸುಪ್ರತೀಕ " ಎಂಬ ಗಜವನ್ನು ಅಪಹರಿಸಿದ್ದನು. ಅದನ್ನು ಮತ್ತೆ ಪಡೆಯ-ಬೇಕೆಂದು ಕುಬೇರನು ನರಕಾಸುರನಿಗೆ ಮಗನಾಗಿ ಜನಿಸಿದ್ದನು. ಶ್ರೀಕೃಷ್ಣನು ಭಗದತ್ತನನ್ನು ಪ್ರಾಗ್ಜ್ಯೋತಿಷಪುರದ ರಾಜ್ಯಸಿಂಹಾಸನದಲ್ಲಿ ಮಂಡಿಸಿ ಪಟ್ಟಾಭಿಷೇಕಮಾಡಿ ಅವನನ್ನು ಅನುಗ್ರಹಿಸಿ ಅಂತಃಪುರವನ್ನು ಪ್ರವೇಶಿಸಿ ನರಕಾಸುರನಿಂದ ಅಪಹರಿಸಲ್ಪಟ್ಟ ಮನೋಹರವಸ್ತ್ರಾಭರಣಾದಿಗಳಿಂದ ಅಲಂಕೃತರಾದ ಹದಿನಾರು ಸಾವಿರದ ನೂರೆಂಟು ಜನ ಶ್ರೇಷ್ಠಯೌವನಸಂಪನ್ನರಾದ ಅಕ್ಷತರಾದ ಕನ್ಯೆಯರನ್ನು ಕಂಡು ಅವರನ್ನು ಬಂಧನದಿಂದ ಬಿಡಿಸಿದನು. ಪೂರ್ವಜನ್ಮದಲ್ಲಿ ಅವರು ಅಗ್ನಿಪುತ್ರರಾಗಿ ಪುರುಷಾವಸ್ಥೆಯಲ್ಲಿರುವಾಗ ಶ್ರೀಕೃಷ್ಣನೇ ತಮಗೆ ಪತಿಯಾಗಬೇಕೆಂದು ಆಶಿಸಿ ಅದಕ್ಕಾಗಿ ಶ್ರೀ ವಾಯುದೇವರನ್ನು ಕುರಿತು ತಪಸ್ಸು ಮಾಡಿ ಅವರ ಅನುಗ್ರಹದಿಂದ ಸ್ತ್ರೀತ್ವವನ್ನು ಪಡೆದು, ಅಲ್ಲಿಂದ ಬದರಿಕಾಶ್ರಮಕ್ಕೆ ಬಂದು ಅಲ್ಲಿದ್ದ ಶ್ರೀನಾರಾಯಣದೇವರ ಅನುಗ್ರಹದಿಂದ ಅಪ್ಸರತ್ವವನ್ನು ಪಡೆದು ನಂತರ ಈ ಜನ್ಮದಲ್ಲಿ ಶ್ರೀಕೃಷ್ಣನ ಕರಪಿಡಿಯಬೇಕೆಂಬ ಬಯಕೆಯಿಂದ ರಾಜಕುಲದಲ್ಲಿ ಜನಿಸಿದ್ದರು. ನರಕಾಸುರನು ಅವರನ್ನು ಬಲಾತ್ಕಾರದಿಂದ ಅಪಹರಿಸಿ ತನ್ನ ಅರಮನೆಯಲ್ಲಿ ಇಟ್ಟಿದ್ದನು. ಶ್ರೀಕೃಷ್ಣನ ದರ್ಶನದಿಂದ ಸಂತೋಷಗೊಂಡ ಆ ಸ್ತ್ರೀಯರು ನೀನೇ ನಮಗೆ ಪತಿಯಾಗಬೇಕೆಂದು ಪ್ರಾರ್ಥಿಸಲು ಅವರಿಗೆ ಹಾಗೆಯೇ ಆಗಲೆಂದು ವರವಿತ್ತು ಅವರೆಲ್ಲರನ್ನೂ ಸುವರ್ಣಪಾಲಕಿ ಮೇನೆಗಳಲ್ಲಿ ಕುಳ್ಳಿರಿಸಿ ದ್ವಾರಕೆಗೆ ಕಳುಹಿಸಿಕೊಟ್ಟು, ಹಿಂದೆ ಇಂದ್ರಮಾತೆಯಿಂದ ನರಕಾಸುರನು ಅಪಹರಿಸಿದ್ದ ಕರ್ಣಕುಂಡಲದೊಡನೆ ಸ್ವರ್ಗಕ್ಕೆ ಹೋಗಿ ದೇವೇಂದ್ರನ ತಾಯಿಯಾದ ಅದಿತಿದೇವಿಗೆ ಅವಳ ಕರ್ಣಕುಂಡಲಗಳನ್ನು ಕೊಟ್ಟು ಸರ್ವರನ್ನೂ ಸಂತೋಷಪಡಿಸಿದನು., ಇತ್ಯಾದಿ ಕಥೆಯು ಈ ಪದ್ಯದಿಂದ ಸೂಚಿತವಾಗುವುದು. ಅಂತಹ ಶ್ರೀಕೃಷ್ಣನು ನನ್ನನ್ನು ರಕ್ಷಿಸಲಿ ಎಂದು ಶ್ರೀಗುರುಸಾರ್ವಭೌಮರು ಪ್ರಾರ್ಥಿಸಿದ್ದಾರೆ.

**ಅಲಂಕಾರ:-** ಇಲ್ಲಿ ಶ್ರೀಕೃಷ್ಣನೆಂಬ ಒಂದೇ ವಸ್ತುವನ್ನು ಅನೇಕ ಘಟನೆಗಳಲ್ಲಿ ಬೆಡಗಿನಿಂದ ವರ್ಣಿಸಿರುವುದರಿಂದ ''ವಿಶೇಷಾಲಂಕಾರ ''ವೂ, ಹಿಂದಿನಂತೆ ''ಸಾರಾಲಂಕಾರ''ವೂ ಇದೆ.

**ಲಕ್ಷಣ:-** ವಿಶೇಷಸ್ಸೋಽಪಿ ಯದ್ಯೇಕಂ ವಸ್ತ್ವ ನೇಕತ್ರವರ್ಣ್ಯತೇ ।

**ಉದಾ:-** ಅಂತರ್ಬಹಿಃ ಪುರಃ ಪಶ್ಚಾತ್ ಸರ್ವದಿಕ್ಷ್ವಪಿ ಸೈವಮೇ ॥

ಇಲ್ಲಿ 'ಅವಧೀತ್,' 'ವ್ಯಧಾತ್,' 'ಅಕೃತ ' ಮತ್ತು ''ಅವೇತ್ '' ಎಂಬ ನಾಲ್ಕು ಕ್ರಿಯಾಪದಗಳಿವೆ.

''ಹನಹಿಂಸಾಗತ್ಯೋಃ'' ಎಂಬ ಧಾತುವಿಗೆ ವಧಾದೇಶ ಬಂದು ಸಕರ್ಮಕ ಕರ್ತರಿ ಲುಙ್ ಪರಸ್ಮೈಪದಿ ಪ್ರಥಮಪುರುಷ ಏಕವಚನದಲ್ಲಿ ''ಅವಧೀತ್ '' ಎಂದಾಗಿದೆ.

| | | | |
|---|---|---|---|
| **ರೂಪ :-** | ಅವಧೀತ್ | ಅವಧಿಷ್ಟಾಂ | ಅವಧಿಷುಃ |
| | ಅವಧೀಃ | ಅವಧಿಷ್ಟಂ | ಅವಧಿಷ್ಟ |
| | ಅವಧಿಷಂ | ಅವಧಿಷ್ವ | ಅವಧಿಷ್ಮ ॥ |

ಎರಡನೆಯ ಮತ್ತು ಮೂರನೆಯ ಧಾತುಗಳ ಅರ್ಥವನ್ನು ಕಾಲಪುರುಷ ವಚನಗಳಲ್ಲಿ ಅವುಗಳ ರೂಪಗಳನ್ನು ಈ ಹಿಂದೆಯೇ ಕೊಡಲಾಗಿದೆ.

''ಅವ-ರಕ್ಷಣೆ '' ಎಂಬ ಧಾತುವಿನ ಸಕರ್ಮಕ ಕರ್ತರಿ ವಿಧಿ ಲಿಙ್ ಪರಸ್ಮೈಪದಿ ಪ್ರಥಮಪುರುಷ ಏಕವಚನದಲ್ಲಿ ''ಅವೇತ್'' ಎಂದಾಗಿದೆ.

| | | | |
|---|---|---|---|
| **ರೂಪ:-** | ಅವೇತ್ | ಅವೇತಾಂ | ಅವೇಯುಃ |
| | ಅವೇಃ | ಅವೇತಂ | ಅವೇತ |
| | ಅವೇಯಂ | ಅವೇವ | ಅವೇಮ ॥ 18 ॥ |

**ಇಂದ್ರಾರಾಧ್ಯೋಽಮರೇಂದ್ರಪ್ರಿಯತಮಮಗಮಾಹೃತ್ಯ ದೇವಾನ್ ವಿಜಿತ್ಯ**
**ಪ್ರಾಪ್ಯಾಥ ದ್ವಾರಕಾಂ ಯಸ್ಸುತಮತಿರುಚಿರಂ ರುಕ್ಮಿಣೀತಃ ಪ್ರವೇದೇ ।**
**ಭ್ರಾತೃವ್ಯಂ ಪೌಂಡ್ರಕಾಖ್ಯಂ ಪುರರುಧಮತನೋತ್ಕೃತ್ತಶೀರ್ಷಂ ತದೀಯಾ-**
**ಪತ್ಯೋತ್ಪನ್ನಾಂ ಚ ಕೃತ್ಯಾಂ ರಥಚರಣರುಚಾ ಕಾಲಯನ್ ಕಾಮಧುಕ್‌ಸ್ಯಾತ್ ॥ 19 ॥**

**ಅನ್ವಯಾರ್ಥ:-** ಯಃ=ಯಾವ ಶ್ರೀಕೃಷ್ಣನು, ಇಂದ್ರಾರಾಧ್ಯಃ = ಇಂದ್ರನಿಂದ ಪೂಜ್ಯನಾಗಿ, ಅಮರೇಂದ್ರಪ್ರಿಯ-ತಮಂ- ಅಮರೇಂದ್ರ = ದೇವೇಂದ್ರನಿಗೆ, ಪ್ರಯತಮಂ = ಅತಿ ಪ್ರೀತಿಪಾತ್ರವಾದ, ಅಗಂ = ಪಾರಿಜಾತ ವೃಕ್ಷವನ್ನು, ಆಹೃತ್ಯ = ಅಪಹರಿಸಿ, ದೇವಾನ್ = ಇಂದ್ರಾದಿ ದೇವತೆಗಳನ್ನು ವಿಜಿತ್ಯ =ಜಯಿಸಿ (ಸೋಲಿಸಿ), ಅಥ = ಅನಂತರದಲ್ಲಿ, ದ್ವಾರಕಾಂ =ದ್ವಾರಕಾ ಪುರಿಯನ್ನು, ಪ್ರಾಪ್ಯ = ಹೊಂದಿ, ಅತಿ ರುಚಿರಂ = ಅತಿ ಮನೋಹರನಾದ, ಸುತಂ = ಪುತ್ರನನ್ನು, ರುಕ್ಮಿಣೀತಃ = ರುಕ್ಮಿಣಿಯ ದೆಸೆಯಿಂದ, ಪ್ರಪೇದೇ =ಪಡೆದನು. ಭಾತೃವ್ಯಂ =ಶತ್ರುವೂ, ದೂರದ ಬಂಧುವೂ ಆದ, ಪುರರುಧಂ = ದ್ವಾರಕೆಯನ್ನು ಮುತ್ತಿದ, ಪೌಂಡ್ರಕಾಖ್ಯಂ = ಪೌಂಡ್ರಕ ವಾಸುದೇವನೆಂಬ ಹೆಸರುಳ್ಳವನನ್ನು, ಕೃತ್ತಶೀರ್ಷಂ = ಕತ್ತರಿಸಲ್ಪಟ್ಟ

ಶಿರವುಳ್ಳವನನ್ನಾಗಿ, ಅತನೋತ್ = ಮಾಡಿದನು. ತದೀಯಾಪತ್ಯೋತ್ಪನ್ನಾಂ ತದೀಯ = ಪೌಂಡ್ರಕವಾಸುದೇವನ, ಅಪತ್ಯ = ಮಗನಿಂದ, ಉತ್ಪನ್ನಾಂ = ಉತ್ಪನ್ನವಾದ, ಕೃತ್ಯಾಂಚ = ಆಭಿಚಾರಿಕ ಅಗ್ನಿಜ್ವಾಲಾರೂಪ ಕೃತ್ಯೆಯನ್ನು, ರಥಚರಣರುಚಾ-ರಥಚರಣ = ಚಕ್ರದ, ರುಚಾ = ಕಾಂತಿಯಿಂದ, ಕಾಲಯನ್ = ಪಲಾಯನಗೊಳಿಸಿದವನಾದ, ಸಃ = ಶ್ರೀಕೃಷ್ಣನು, ಕಾಮಧುಕ್ = ಅಭೀಷ್ಟಪ್ರದವಾದ ಕಾಮಧೇನುವು (ಮಮೇತಿಶೇಷಃ = ನನಗೆ) ಸ್ಯಾತ್ ಆಗಲಿ.

**ವಿಗ್ರಹವಾಕ್ಯ :-** ಇಂದ್ರೇಣ ಆರಾಧ್ಯಃ ಇಂದ್ರಾರಾಧ್ಯಃ । ಅಮರಾಣಾಂ ಇಂದ್ರಃ ಅಮರೇಂದ್ರಃ, ಅತ್ಯಂತಂ ಪ್ರಿಯಃ ಪ್ರಿಯತಮಃ, ಅಮರೇಂದ್ರಸ್ಯ ಪ್ರಿಯತಮಃ ಅಮರೇಂದ್ರ ಪ್ರಿಯತಮಃ ತಮ್ । ನ ಗಚ್ಛತೀತ್ಯಗಃ ತಂ ಆಗಮ್ । ಅತ್ಯಂತಂ ರುಚಿರಃ ಅತಿರುಚಿರಃ ತಮ್ । ಪುರಂರುಣದ್ಧಿ ಇತಿ ಪುರರುತ್ ತಂ ಪುರರುಧಮ್ । ಕೃತ್ತಂ ಶೀರ್ಷಂ ಯಸ್ಯ ಸಃ ಕೃತ್ತಶೀರ್ಷಃ, ತಮ್ । ತಸ್ಯ ಸಂಬಂಧಿ ತದೀಯಂ, ತದೀಯಂ ಚ ತತ್ ಅಪತ್ಯಂ ಚ ತದಿಯಾಪತ್ಯಂ, ತದಿಯಾಪತ್ಯೇನ ಉತ್ಪನ್ನಾ ತದೀಯಾಪತ್ಯೋತ್ಪನ್ನಾ , ತಾಂ ತದೀಯಾಪತ್ಯೋತ್ಪನ್ನಾಮ್ । ರಥಸ್ಯ ಚರಣಂ ರಥಚರಣಂ, ರಥಚರಣಸ್ಯ ರುಟ್ ರಥಚರಣರುಟ್ ತಯಾರಥಚರಣರುಚಾ । ಕಾಮಂ ದೋಗ್ಧಿ ಇತಿ ಕಾಮಧುಕ್ ॥

**ತಾತ್ಪರ್ಯ :-** ಶ್ರೀಕೃಷ್ಣನು ನರಕಾಸುರನು ಅಪಹರಿಸಿದ್ದ ಕರ್ಣಕುಂಡಲಗಳನ್ನು ಅದಿತಿ ದೇವಿಗೆ ಕೊಟ್ಟ ತರು-ವಾಯ ಇಂದ್ರಾದಿಗಳಿಂದ ಸ್ತುತ್ಯನಾಗಿ ಅವರನ್ನು ಕಳುಹಿಸಿಕೊಟ್ಟು, ಇಂದ್ರನಿಗೆ ಅತಿಪ್ರೀತಿಕರವಾದ ನಂದನವನವನ್ನು ಸತ್ಯಭಾಮೆಯೊಡನೆ ವಿಹಾರಕ್ಕಾಗಿ ಪ್ರವೇಶಿಸಿ ಅಲ್ಲಿ ಕಂಗೊಳಿಸುತ್ತಿದ್ದ ಮಣಿಕಾಂಚನಾತ್ಮಕವಾದ, ಸಕಲ ವಾಂಛಿತಗಳನ್ನೂ ಕೊಡುವ ಮತ್ತು ದುಃಖಹಾರಕವಾದ ಪಾರಿಜಾತ ವೃಕ್ಷವನ್ನು ಕಂಡು ಮರುಳಾದ ಸತ್ಯಭಾಮೆಯು ಅದನ್ನು ತನ್ನ ಮನೆಗೆ ಕೊಂಡೊಯ್ಯಬೇಕೆಂದು ಆಶಿಸಲು ಪ್ರಿಯಪತ್ನಿಯ ಮನೋರಥವನ್ನು ಪೂರ್ಣಮಾಡಲು ಬುಡಸಹಿತ ಪಾರಿಜಾತ ವೃಕ್ಷವನ್ನು ಕಿತ್ತು ಗರುಡನ ಮೇಲಿಟ್ಟು ಪತ್ನೀಸಹಿತನಾಗಿ ತಾನೂ ಕುಳಿತು ದ್ವಾರಕೆಗೆ ತೆರಳುತ್ತಿರುವಾಗ ಅದನ್ನು ಕಂಡು ವನಪಾಲಕರು ದೇವೇಂದ್ರನಿಗೆ ತಿಳಿಸಲು ಶಚೀದೇವಿಯಿಂದ ಪ್ರಚೋದಿತನಾದ ಇಂದ್ರನು ಅಸುರಾವೇಶದಿಂದ ದಿಕ್ಪಾಲಕರೊಡನೆ ಸೇರಿ ಶ್ರೀಕೃಷ್ಣನ ಮೇಲೆ ಯುದ್ಧಕ್ಕೆ ಬರಲು ಅವರೆಲ್ಲರನ್ನೂ ಜಯಿಸಿ, ಪರಾಜಿತರಾದ ಇಂದ್ರಾದಿಗಳಿಂದ ಸ್ತುತ್ಯನಾಗಿ, ಇಂದ್ರನು ತನ್ನ ಅಪರಾಧ ಶಾಂತಿಗಾಗಿ ಮಣಿಕಾಂಚನ ಶೃಂಗವನ್ನು ಕಾಣಿಕೆಯಾಗಿ ಅರ್ಪಿಸಲು ಅದನ್ನೂ, ಪಾರಿಜಾತ ವೃಕ್ಷವನ್ನು ಸ್ವೀಕರಿಸಿ ದೇವತೆಗಳಿಂದ ಬೀಳ್ಕೊಂಡು ಶ್ರೀಕೃಷ್ಣನು ದ್ವಾರಕಾಪಟ್ಟಣಕ್ಕೆ ಬಂದು ಸತ್ಯಭಾಮೆಯ ಮನೆಯ ಅಂಗಳದಲ್ಲಿ ಶೃಂಗಸಹಿತವಾಗಿ ಪಾರಿಜಾತ ವೃಕ್ಷವನ್ನು ಸ್ಥಾಪಿಸಿ, ಅದರ ಪ್ರಭಾವದಿಂದ ತಮ್ಮವರಾದ ಸಕಲ ಯಾದವರಿಗೂ ಯಥೇಷ್ಟವಾಗಿ ರತ್ನಗಳನ್ನು ಕೊಟ್ಟು ಎಲ್ಲರನ್ನೂ ಸಂತೋಷಪಡಿಸಿದನು.

ಅನಂತರ ಹಿಂದೆ ರುದ್ರದೇವರು ಶ್ರೀಹರಿಯ ಅವತಾರ ಕಾಲದಲ್ಲಿ ತನ್ನಿಂದ ವರಗಳನ್ನು ಪಡೆಯುವುದರ ಮೂಲಕ ಲೋಕದಲ್ಲಿ ಖ್ಯಾತಿಯುಂಟಾಗುವಂತೆ ಮಾಡಬೇಕೆಂದು ಪ್ರಾರ್ಥಿಸಿದಾಗ ಅಭಯವಿತ್ತಿದ್ದಂತೆ ಪುತ್ರಾಪೇಕ್ಷಿಯಾಗಿ ಶ್ರೀ ರುದ್ರ ದೇವರನ್ನು ಕುರಿತು ತಪಸ್ಸನ್ನಾಚರಿಸಿ ಅವರಿಂದ ಪುತ್ರವರವನ್ನು ಪಡೆದು ಹಿಂದೆ ರುದ್ರದೇವರಿಂದ ದಗ್ಧನಾಗಿದ್ದ ವಿಷ್ಣ್ವಾವೇಶಯುಕ್ತನಾದ ಮನ್ಮಥನನ್ನು ರುಕ್ಮಿಣಿಯಲ್ಲಿ ಪ್ರದ್ಯುಮ್ನನೆಂಬ ಹೆಸರಿನಿಂದ ಪುತ್ರನನ್ನಾಗಿ ಪಡೆದು, ಭಕ್ತರಾದ ರುದ್ರದೇವರ ಕೀರ್ತಿ ಬೆಳಗುವಂತೆ ಮಾಡಿ ಅನುಗ್ರಹಿಸಿದನು.

ಕೆಲಕಾಲ ಕಳೆದಮೇಲೆ ನಾರದರ ಉಪದೇಶದಂತೆ ಶ್ರೀಕೃಷ್ಣನ ಶತ್ರುವಾದ ಶಂಬರಾಸುರನು ಕೃಷ್ಣನ ಮೇಲಿನ ದ್ವೇಷದಿಂದ ಪ್ರದ್ಯುಮ್ನನನ್ನು ಅಪಹರಿಸಿ ಅವನನ್ನು ಸಮುದ್ರದಲ್ಲಿ ಎಸೆದುಬಿಟ್ಟನು. ಒಂದು ದೊಡ್ಡ ಮೀನು ಪ್ರದ್ಯುಮ್ನನನ್ನು ನುಂಗಿತು. ಮೀನುಗಾರ ದೊಡ್ಡ ಬಲೆ ಬೀಸಿದಾಗ ಆ ಮೀನು ಅದರಲ್ಲಿ ಸಿಕ್ಕಿಬಿದ್ದಿತು. ಮೀನುಗಾರನು ಅದನ್ನು ತಂದು

ಶಂಬರಾಸುರನಗೆ ಅರ್ಪಿಸಿದನು. ಅಡಿಗೆಯವರು ಅವನನ್ನು ಸಂಹರಿಸಲು ಉದ್ಯುಕ್ತನಾದಾಗ, ಹಿಂದೆ ದ್ರೌಪದೀದೇವಿಯನ್ನು ಪಂಚಪತಿಗಳ ಅರ್ಧಾಂಗಿಯೆಂದು ದೂಷಿಸಿದ ಅಪರಾಧಕ್ಕಾಗಿ ಚತುರ್ಮುಖ ಬ್ರಹ್ಮದೇವರಿಂದ ಶಪಿಸಲ್ಪಟ್ಟು, ರೂಪಾಂತರದಿಂದ ಮಾಯಾವತಿಯೆಂಬ ಹೆಸರಿನಿಂದ ಶಂಬರಾಸುರನ ಮನೆಯಲ್ಲಿ ಬಂದಿದ್ದ ರತೀದೇವಿಯಿಂದ ರಕ್ಷಿಸಲ್ಪಟ್ಟು, ನಾಲ್ಕು ವರ್ಷಗಳಲ್ಲಿ ಯೌವನಸಂಪನ್ನನಾದ ಪ್ರದ್ಯುಮ್ನನು ತನ್ನ ಪತ್ನಿಯಾದ ರತೀದೇವಿಯು ಹೇಳಿದ ಉಪಾಯದಂತೆ ಶಂಬರಾಸುರನನ್ನು ಸಂಹಾರಮಾಡಿ ರತೀಸಹಿತನಾಗಿ ದ್ವಾರಕಾಪಟ್ಟಣಕ್ಕೆ ಬಂದನು. ಸುಖವಾಗಿ ಬಂದ ಪ್ರದ್ಯುಮ್ನನನ್ನು ಕಂಡು ರುಕ್ಮಿಣೀ, ಬಾಂಧವ ಸಹಿತನಾದ ಶ್ರೀಕೃಷ್ಣನು ಮುದಗೊಂಡನು.

ಶ್ರೀಕೃಷ್ಣನ ತಂದೆಯಾದ ವಸುದೇವನಿಗೆ ದಿತಿಸ್ವರೂಪಳಾದ ಕಾಶೀರಾಜನ ಪುತ್ರಿಯಲ್ಲಿ ಪುತ್ರಿಕಾಪುತ್ರನ್ಯಾಯದಿಂದ ವೇನಸ್ವರೂಪನಾದ ಪೌಂಡ್ರಕವಾಸುದೇವನು ಜನಿಸಿದ್ದನು. ಅವನಿಗೆ ಯಾದವರಲ್ಲಿ ಮುಖ್ಯವಾಗಿ ಕೃಷ್ಣನಲ್ಲಿ ಬಹಳ ದ್ವೇಷವಿತ್ತು. ಒಮ್ಮೆ ಶ್ರೀಕೃಷ್ಣನು ಬದರಿಕಾಶ್ರಮಕ್ಕೆ ಹೋಗಿದ್ದ ಸಂಧಿ ಸಾಧಿಸಿ ಬಂಗಾರದ ಗರುಡನ ಮೇಲೆ ಕುಳಿತು ಪೌಂಡ್ರಕವಾಸುದೇವನು ಸೈನ್ಯಸಹಿತನಾಗಿ ರಾತ್ರಿಕಾಲದಲ್ಲಿ ದ್ವಾರಕೆಯನ್ನು ಮುತ್ತಿ ಕಿರುಕುಳ ಯುದ್ಧ ಪ್ರಾರಂಭಿಸಲು ಬಲರಾಮಾದಿ ಯಾದವವೀರರು ಅವನನ್ನು ಪರಾಜಯಗೊಳಿಸಿದರು. ಯುದ್ಧದಲ್ಲಿ ಸೋತ ಪೌಂಡ್ರಕವಾಸುದೇವನು ಕಾಶೀಪಟ್ಟಣಕ್ಕೆ ಹಿಂದಿರುಗಿದನು. ಬದರಿಯಿಂದ ಮರಳಿಬಂದ ಕೃಷ್ಣನು ಈ ಎಲ್ಲ ವಿಚಾರಗಳನ್ನೂ ತಿಳಿದು ಪೌಂಡ್ರಕ ವಾಸುದೇವನ ಅವಿವೇಕಕ್ಕಾಗಿ ಮರುಗಿದನು. ಶ್ರೀಕೃಷ್ಣನು ದ್ವಾರಕೆಗೆ ಬಂದ ವಿಷಯವರಿತು ಪೌಂಡ್ರಕ ವಾಸುದೇವನು ಯುದ್ಧಕ್ಕೆ ಕರೆಕಳುಹಿಸಿದನು. ಕೃಷ್ಣನು ಕಾಶಿಗೆ ಹೋಗಿ ಪೌಂಡ್ರಕ ವಾಸುದೇವನ ಶಿರಸ್ಸನ್ನು ಚಕ್ರದಿಂದ ಕತ್ತರಿಸಿ ದ್ವಾರಕೆಗೆ ಮರಳಿದನು. ತನ್ನ ತಂದೆಯನ್ನು ಸಂಹರಿಸಿದನೆಂಬ ಕೋಪದಿಂದ ಪೌಂಡ್ರಕ ವಾಸುದೇವನ ಮಗನಾದ ಸುದಕ್ಷಿಣನು ದ್ವಾರಕೆಯನ್ನು ನಾಶಪಡಿಸಲು ಸಂಕಲ್ಪಿಸಿ ರುದ್ರದೇವರನ್ನು ಕುರಿತು ತಪಸ್ಸುಮಾಡಿ ಅವರಿಂದ ವರವನ್ನು ಪಡೆದು ಅಭಿಚಾರಿಕ ಕ್ರಮದಿಂದ ದಕ್ಷಿಣಾಗ್ನಿಯಲ್ಲಿ ಭಯಂಕರವಾದ ಕರಚರಣಗಳಿಂದ ಅಸುರಾವೇಶಯುಕ್ತವಾದ ಅಗ್ನಿಸ್ವರೂಪವಾದ ಕೃತ್ಯೆಯೊಂದನ್ನು ಹುಟ್ಟಿಸಿ ಅದನ್ನು ದ್ವಾರಕಾ ನಾಶಕ್ಕಾಗಿ ಕಳುಹಿಸಲು, ಶ್ರೀಕೃಷ್ಣನು ಭಯಂಕರ ಜ್ವಾಲೆಯಿಂದ ಧಾವಿಸುತ್ತಿರುವ ಆ ಕೃತ್ಯೆಯನ್ನು ನೋಡಿ ಜಾಜ್ವಲ್ಯಮಾನವಾದ ಅತಿ ಭಯಂಕರವಾದ ತನ್ನ ಸುದರ್ಶನ ಚಕ್ರವನ್ನು ಬಿಡಲು ಅದರ ಮುಂದೆ ನಿಲ್ಲಲಾಗದ ಕೃತ್ಯೆಯು ಪಲಾಯನ ಬೆಳೆಸಿ ತನ್ನನ್ನು ಅಭಿಚಾರಿಕ ಕ್ರಮದಿಂದ ಸೃಷ್ಟಿಸಿದ ಸುದಕ್ಷಿಣನನ್ನೇ ನಾಶಪಡಿಸಿತು. ಸುದರ್ಶನ ಚಕ್ರವು ಅವನ ಪರಿವಾರ ಸೈನಿಕರನ್ನೂ ಸಂಹರಿಸಿ ಶ್ರೀಕೃಷ್ಣನ ಸನ್ನಿಧಿಗೆ ಮರಳಿ ಬಂದುಸೇರಿತು. ಹೀಗೆ ಮಹಾಮಹಿಮೆಯನ್ನು ತೋರಿದ ಶ್ರೀಕೃಷ್ಣನು ಸರ್ವರನ್ನೂ ಆನಂದಗೊಳಿಸಿದನು, ಮುಂತಾದ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುವುದು. ಇಂತಹ ಮಹಾನುಭಾವನಾದ ಶ್ರೀ ಕೃಷ್ಣನು ನನಗೆ ಕಾಮಧೇನುವಾಗಲಿ ಅಂದರೆ ಸರ್ವಾಭೀಷ್ಟಪ್ರದನಾಗಲಿ ಎಂದು ಶ್ರೀಗುರುರಾಜರು ಪ್ರಾರ್ಥಿಸಿದ್ದಾರೆ.

**ಅಲಂಕಾರಗಳು:-** ಇಲ್ಲಿ ಶಂಬರಾಸುರನು ಪ್ರದ್ಯುಮ್ನನನ್ನು ಕೊಲ್ಲಲು ಸಮುದ್ರದಲ್ಲಿ ಬಿಸುಟನು. ಅದೇ ಪ್ರದ್ಯುಮ್ನನು ಮತ್ಸ್ಯಗರ್ಭದಲ್ಲಿ ಸೇರಿ ಶಂಬರನ ಮನೆಗೆ ಬಂದು ಅವನನ್ನೇ ಕೊಂದನು. ಪೌಂಡ್ರಕ ವಾಸುದೇವನು ತನ್ನ ಎದುರಾಳಿಯಾದ ಕೃಷ್ಣನನ್ನು ಕೊಲ್ಲಲು ಹೋಗಿ ತಾನೇ ಕೃಷ್ಣನಿಂದ ಹತನಾದನು. ಪೌಂಡ್ರಕನ ಮಗನಾದ ಸುದಕ್ಷಿಣನು ಕೃಷ್ಣನನ್ನು ಕೊಲ್ಲಲು ತಪಸ್ಸು ಮಾಡಿ ಶಕ್ತಿಯನ್ನು ಪಡೆದು ಅಭಿಚಾರಿಕ ಕ್ರಮದಿಂದ ಕೃತ್ಯೆಯನ್ನು ಸೃಷ್ಟಿಸಿ ದ್ವಾರಕೆಯ ಮೇಲೆ ಪ್ರಯೋಗಿಸಿದನು. ಅದು ಅವನಿಗೆ ತಿರುಗು ಬಾಣವಾಗಿ ಬಂದು ಅವನನ್ನೇ ಕೊಂದಿತು ಇತ್ಯಾದಿ ಕಥೆಯನ್ನು ವರ್ಣಿಸಿರುವುದರಿಂದ ಇಲ್ಲಿ ''ವಿಷಮಾಲಂಕಾರ''ವಿದೆ. ಅದರ ಲಕ್ಷಣವನ್ನು ಹಿಂದೆಯೇ ಹೇಳಲಾಗಿದೆ. ಮತ್ತು ''ಸಾರಾಲಂಕಾರ''ವೂ ''ವಿಶೇಷಾಲಂಕಾರ''ಗಳೂ ಇವೆ.

ಇಲ್ಲಿ ''ಪ್ರಪೇದೇ,'' ''ಅತನೋತ್,'' ''ಸ್ಯಾತ್'' ಎಂಬ ಮೂರು ಕ್ರಿಯಾಪದಗಳಿವೆ.

''ಪ್ರ'' ಉಪಸರ್ಗಪೂರ್ವಕ ''ಪದಗತೌ'' ಎಂಬ ಧಾತುವಿನ ಸಕರ್ಮಕ ಕರ್ತರಿ ಲಿಟ್ ಆತ್ಮನೇಪದಿ ಪ್ರಥಮಪುರುಷ ಏಕವಚನದಲ್ಲಿ ''ಪ್ರಪೇದೇ'' ಎಂದಾಗಿದೆ.

| | | | |
|---|---|---|---|
| **ರೂಪ :-** | ಪೇದೇ | ಪೇದಾತೇ | ಪೇದಿರೇ, |
| | ಪೇದಿಷೇ | ಪೇದಾಥೇ | ಪೇದಿಧ್ವೇ |
| | ಪೇದೇ | ಪೇದಿವಹೇ | ಪೇದಿಮಹೇ ॥ |

''ಅನುವಿಸ್ತಾರೆ'' ಎಂಬ ಧಾತುವಿನ ಸಕರ್ಮಕ ಕರ್ತರಿ ಲಙ್. ಪರಸ್ಮೈಪದಿ ಪ್ರಥಮಪುರುಷ ಏಕವಚನದಲ್ಲಿ ''ಅತನೋತ್'' ಎಂದಾಗಿದೆ.

| | | | |
|---|---|---|---|
| **ರೂಪ:-** | ಅತನೋತ್ | ಅತನುತಾಂ | ಅತನ್ವನ್ |
| | ಆತನೋಃ | ಅತನುತಂ | ಅತನುತ |
| | ಅತನವಂ | ಅತನುವ | ಅತನುಮ |
| | | ಅತನ್ವ | ಅತನ್ಮ |

''ಸ್ಯಾತ್'' ಇದರ ಅರ್ಥವನ್ನೂ, ಕಾಲಪುರುಷವಚನಗಳಲ್ಲಿ ರೂಪಗಳನ್ನೂ ಹಿಂದೆಯೇ ಕೊಡಲಾಗಿದೆ ॥ 19 ॥

**ಕೃಷ್ಣಃ ಸೂರ್ಯೋಪರಾಗೇ ನಿಜಯುವತಿಗಣೈರ್ಭಾರ್ಗವಂ ಕ್ಷೇತ್ರಮಾಪ್ತಃ**
**ತತ್ರಾಯಾತಾನ್ ಸ್ವಬಂಧೂನ್ ಮುನಿಗಣಮಪಿ ಸಂತೋಷ್ಯ ಯಜ್ಞಂ ಸ್ವಪಿತ್ರಾ ।**
**ಯೋಽನುಷ್ಠಾಪ್ಯಾಪ್ಯ ನೈಜಂ ಪುರಮಥ ವದಿತಾನೇಕತತ್ತ್ವಾನಿ ಪಿತ್ರೇ**
**ಮಾತುಃ ಪುತ್ರಾನ್ ಪ್ರದರ್ಶ್ಯಾಕೃತ ಹಿತಮಹಿತಂ ಮೇಽಪನುದ್ಯಾತ್ಸ ಈಶಃ ॥ 20 ॥**

**ಅನ್ವಯಾರ್ಥ:-** ಯಃ = ಯಾವ ಶ್ರೀಕೃಷ್ಣನು, ಸೂರ್ಯೋಪರಾಗೇ = ಸೂರ್ಯಗ್ರಹಣ ಸಮಯದಲ್ಲಿ, ನಿಜ-ಯುವತಿ ಗಣೈಃ (ಸಹೇತಿ ಶೇಷಃ) = ತನ್ನ ಪತ್ನಿಸಮೂಹಯುಕ್ತನಾಗಿ, ಭಾರ್ಗವಂ ಕ್ಷೇತ್ರಂ = ಶ್ರೀಪರಶುರಾಮ ದೇವರಿಂದ ನಿರ್ಮಿತವಾದ ''ಸಮಂತ ಪಂಚಕ'' ವೆಂಬ ಪುಣ್ಯಕ್ಷೇತ್ರವನ್ನು, ಆಪ್ತಃ = ಹೊಂದಿ, ತತ್ರ = ಆ ಕ್ಷೇತ್ರದಲ್ಲಿ, ಆಯಾತಾನ್ = ಆಗಮಿಸಿದ, ಸ್ವಬಂಧೂನ್ = ತನ್ನ ಪ್ರೀತಿಪಾತ್ರರಾದ ಬಂಧುಗಳನ್ನೂ, ಮುನಿಗಣಮಪಿ = ಮುನಿವೃಂದವನ್ನೂ ಸಹ, ಸಂತೋಷ್ಯ = ಆನಂದಪಡಿಸಿ, ಸ್ವಪಿತ್ರಾ = ತನ್ನ ತಂದೆಯಾದ ವಸುದೇವನಿಂದ, ಯಜ್ಞಂ = ಯಾಗವನ್ನು, ಅನುಷ್ಠಾಪ್ಯ = ಮಾಡಿಸಿ, ನೈಜಂ = ಸ್ವಕೀಯವಾದ, ಪುರಂ = ದ್ವಾರಕಾಪುರಕ್ಕೆ ಆಪ್ಯ = ಬಂದು, ಅಥ = ಅನಂತರ, ಪಿತ್ರೇ = ತಂದೆಯಾದ ವಸುದೇವನಿಗೆ ಅನೇಕ ತತ್ತ್ವಾನಿ = ಭಗವದ್ವಿಷಯಕವಾದ ಅನೇಕ ತತ್ವಗಳನ್ನು, ವದಿತಾ = ನಿರೂಪಿಸಿದವನಾಗಿ (ಹೇಳಿದವನಾಗಿ), ಮಾತುಃ = ತಾಯಿಯಾದ ದೇವಕೀದೇವಿಗೆ, ಪುತ್ರಾನ್ = ಮಕ್ಕಳನ್ನು, ಪ್ರದರ್ಶ್ಯ = ತೋರಿಸಿ, ಹಿತಂ = ಹರ್ಷವನ್ನು, ಅಕೃತ = ಮಾಡಿದನು. ಈಶಃ = ಪರಮ ಸಮರ್ಥನಾದ, ಸಃ = ಶ್ರೀಕೃಷ್ಣನು, ಮೇ = ನನಗೆ, ಅಹಿತಂ = ಅನಭಿಮತವಾದುದನ್ನು, ಅಪನುದ್ಯಾತ್ = ಪರಿಹರಿಸಲಿ.

**ವಿಗ್ರಹವಾಕ್ಯ :-** ಸೂರ್ಯಸ್ಯ ಉಪರಾಗಃ ಸೂರ್ಯೋಪರಾಗಃ, ತಸ್ಮಿನ್ । ಯುವತೀನಾಂ ಗಣಾ. ಯುವತಿಗಣಾಃ ನಿಜಾಶ್ಚ ತೇ ಯುವತಿಗಣಾಶ್ಚ ನಿಜಯುವತಿಗಣಾಃ, ತೈಃ । ಭೃಗೋ ಇದಂ ಭಾರ್ಗವಮ್ । ಸ್ವಸ್ಯ ಬಂಧವಃ ಸ್ವಬಂಧವಃ, ತಾನ್ । ಮುನೀನಾಂ ಗಣಃ ಮುನಿ ಗಣಃ, ತಮ್ । ಸ್ವಸ್ಯ ಪಿತಾ ಸ್ವಪಿತಾ, ತೇನ ಸ್ವಪಿತ್ರಾ ॥ ಅನೇಕಾನಿಚ ತಾನಿ ತತ್ವಾನಿ ಚ ಅನೇಕ ತತ್ತ್ವಾನಿ ತಾನಿ ॥

**ತಾತ್ಪರ್ಯ:-** ಶ್ರೀಕೃಷ್ಣನು ಒಮ್ಮೆ ಸೂರ್ಯಗ್ರಹಣಕಾಲದಲ್ಲಿ ತನ್ನ ಪತ್ನಿಯರು ಪುತ್ರ ಪೌತ್ರಾದಿಗಳೊಡನೆ ಯಾದವರಿಂದ ಸಹಿತನಾಗಿ ಹಿಂದೆ ಪರುಶುರಾಮ ದೇವರು ದುಷ್ಟರಾದ ಕ್ಷತ್ರಿಯರನ್ನು ಸಂಹರಿಸಿ ಅವರ ರಕ್ತಸಮೂಹದಿಂದ ನಿರ್ಮಿಸಿದ ಐದು ಮಡುವುಗಳಿಂದ ''ಸಮಂತ ಪಂಚಕ'' ವೆಂಬ ಹೆಸರು ಪಡೆದ ಪುಣ್ಯಕ್ಷೇತ್ರಕ್ಕೆ ಬಂದನು. ಅಲ್ಲಿಗೆ ನಂದಾದಿಗಳು, ಪಾಂಡವರು, ಮತ್ತು ಇತರ ಭೂಪಾಲಕರೂ, ವಸಿಷ್ಠಾದಿ ಮುನಿಗಳೂ ಶ್ರೀಕೃಷ್ಣನ ದರ್ಶನಕ್ಕಾಗಿ ಬಂದರು. ಶ್ರೀಕೃಷ್ಣನು ಅವರೆಲ್ಲರನ್ನೂ ಸಂತೋಷಪಡಿಸಿ ವಸಿಷ್ಠ ಮುನಿಗಳನ್ನು ಋತ್ವಿಜರನ್ನಾಗಿ ಮಾಡಿ ತಂದೆಯಾದ ವಸುದೇವನಿಂದ ಮೂರು ಬಾರಿ ಯಜ್ಞವನ್ನು ಮಾಡಿಸಿದನು. ಯಾಗವು ಯಶಸ್ವಿಯಾಗಿ ಮುಗಿದ ಮೇಲೆ ಸರ್ವರಿಗೂ ತಮ್ಮ ತಮ್ಮ ದೇಶಗಳಿಗೆ ತೆರಳಲು ಅಪ್ಪಣೆಯಿತ್ತು ಸ್ವಬಾಂಧವರೊಡನೆ ದ್ವಾರಕಾಪುರಕ್ಕೆ ಬಂದು ಸೇರಿದನು. ಅಲ್ಲಿ ಒಂದು ಸಲ ತಂದೆಯಾದ ವಸುದೇವನಿಗೆ ಭಗವದ್ವಿಷಯಕವಾದ ಜಗಜ್ಜನ್ಮಾದಿಕಾರಣತ್ವರೂಪ ತತ್ವಗಳನ್ನು ಉಪದೇಶಿಸಿದನು. ಮತ್ತೊಮ್ಮೆ ತಾಯಿಯಾದ ದೇವಕಿಯು ಕಂಸನಿಂದ ಸಂಹೃತರಾದ ತನ್ನ ಆರುಜನ ಮಕ್ಕಳನ್ನು ತೋರಿಸು ಎಂದು ಕೇಳಿದಳು. ತಾಯಿಯ ಮನಸ್ಸಂತೋಷ ಪಡಿಸಲು ಶ್ರೀಕೃಷ್ಣನು ಬಲರಾಮನಿಂದ ಸಹಿತನಾಗಿ ಸುತಲಲೋಕಕ್ಕೆ ತೆರಳಿದನು. ಅಲ್ಲಿ ಬಲಿಯು ಶ್ರೀಕೃಷ್ಣನನ್ನು ಸ್ವಾಗತಿಸಿ ಪೂಜಿಸಿದನು. ಅಲ್ಲಿ ಬಾಲಕರಾಗಿಯೇ ಇದ್ದ ತನ್ನ ಆರುಜನ ಅಣ್ಣಂದಿರನ್ನು ಕಂಡನು.

ಆ ಆರುಜನ ಬಾಲಕರು ಹಿಂದೆ ಮರೀಚಿಮುನಿಯ ಪುತ್ರರಾಗಿದ್ದರು. ಒಮ್ಮೆ ದೇವಲನನ್ನು ಅಪಹಾಸ್ಯ ಮಾಡಿದ್ದರಿಂದ ಕುಪಿತನಾದ ದೇವಲನು ತನ್ನನ್ನು ನಿಂದಿಸಿದ ಅಪರಾಧಕ್ಕಾಗಿ ಅವರನ್ನು ನೀವು ಕಾಲನೇಮಿಯ ಪುತ್ರರಾಗಿ ಜನಿಸಿರಿ '' ಎಂದು ಶಾಪ ಕೊಟ್ಟಿದ್ದನು. ಆರು ಜನ ಮರೀಚಪುತ್ರರು, ಅನಂತರ ಚತುರ್ಮುಖಬ್ರಹ್ಮದೇವರನ್ನು ಕುರಿತು ತಪಸ್ಸು ಮಾಡಿ ಬ್ರಹ್ಮನನ್ನು ಮೆಚ್ಚಿಸಿ ಅವನಿಂದ ಅವಧ್ಯತ್ವ ವರವನ್ನು ಪಡೆದರು. ಈ ವಿಷಯ ತಿಳಿದು ಹಿರಣ್ಯಕಶ್ಯಪನು ''ನಾನಿದ್ದರೂ ನನ್ನನ್ನು ಬಿಟ್ಟು ಬೇರೊಬ್ಬ ಬ್ರಹ್ಮನಿಂದ ವರಪಡೆದಿದ್ದೀರಿ. ಆದ್ದರಿಂದ ನೀವು ಭೂಲೋಕದಲ್ಲಿ ಜನಿಸಿ ನಿಮ್ಮ ತಂದೆಯಿಂದಲೇ ಸಂಹೃತರಾಗಿರಿ''. ಎಂದು ಶಾಪಕೊಟ್ಟನು. ಅನಂತರ ಅವರು ಕಾಲನೇಮಿಯ ದೇಹವನ್ನು ಸೇರಿದರು. ಅವನು ನಿದ್ರೆಯಲ್ಲಿದ್ದಾಗ ದುರ್ಗಾದೇವಿಯಿಂದ ಒಬ್ಬೊಬ್ಬರನ್ನಾಗಿ ಆಕರ್ಷಿತರಾಗಿ ದೇವಕಿಯ ಗರ್ಭದಲ್ಲಿ ಸ್ಥಾಪಿಸಲ್ಪಟ್ಟು ಒಬ್ಬೊಬ್ಬರಾಗಿ ಆರುಜನರೂ ಕಾಲನೇಮಿಯ ಸ್ವರೂಪನಾದ ಕಂಸನಿಂದ ಸಂಹರಿಸಲ್ಪಟ್ಟಿದ್ದರು. ಆ ಆರುಜನ ಬಾಲಕರನ್ನು ಶ್ರೀಕೃಷ್ಣನು ಕರೆದುಕೊಂಡು ಬಂದು ತಾಯಿಯಾದ ದೇವಕಿಗೆ ಅರ್ಪಿಸಿದನು. ಸಂತುಷ್ಟಳಾದ ದೇವಕಿಯು ಆ ಮಕ್ಕಳಿಗೆ ಸ್ತನ್ಯಪಾನ ಮಾಡಿಸಿದಳು. ಸ್ವಭುಕ್ತಶೇಷ ಸ್ತನ್ಯಪಾನದಿಂದ ಪರಿಶುದ್ಧರಾದ ಆ ಆರುಜನರ ದೋಷಗಳನ್ನು ಪರಿಹರಿಸಿ ಶ್ರೀಕೃಷ್ಣನು ಅವರಿಗೆ ಸದ್ಗತಿಯನ್ನು ದಯಪಾಲಿಸಿ ಸರ್ವರನ್ನೂ ಸಂತೋಷಪಡಿಸಿದನು ಮುಂತಾದ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುವುದು. ಇಂಥ ಪರಮ ಸಮರ್ಥನೂ. ಸ್ವಾಮಿಯೂ ಆದ ಶ್ರೀಕೃಷ್ಣನು ನನ್ನ ಅಹಿತಗಳನ್ನು ಪರಿಹರಿಸಲಿ ಎಂದು ಶ್ರೀಗುರುಸಾರ್ವಭೌಮರು ಪ್ರಾರ್ಥಿಸಿದ್ದಾರೆ.

**ಅಲಂಕಾರಗಳು :-** ಇಲ್ಲಿ ಶ್ರೀಕೃಷ್ಣನು ತನ್ನ ತಾಯಿಯು ಕಂಸನಿಂದ ಸಂಹರಿಸಲ್ಪಟ್ಟ ಆರು ಜನ ಮಕ್ಕಳನ್ನು ತೋರಿಸೆಂದು ಕೇಳಿದಾಗ ಸುತಲ ಲೋಕಕ್ಕೆ ಹೋಗಿ ಅವರನ್ನು ಕರೆತಂದು ತೋರಿಸಿದನು ಎಂಬುದು ಮತ್ತು ಆರುಜನ ಮರೀಚಪುತ್ರರು ದೇವಲನ, ಹಿರಣ್ಯಕಶ್ಯಪನ ಶಾಪಗಳಿಂದ ಕಾಲನೇಮಿಯ ಮಕ್ಕಳಾಗಿ ಅವನ ಗರ್ಭದಲ್ಲಿರುವಾಗ

ದುರ್ಗಾದೇವಿಯು ಒಬ್ಬೊಬ್ಬರನ್ನಾಗಿ ಅಲ್ಲಿಂದ ಆಕರ್ಷಿಸಿ ದೇವಕಿಯ ಗರ್ಭದಲ್ಲಿರಿಸಿದಳು ಮುಂತಾದ ಅದ್ಭುತ ಚರಿತ್ರೆ ಇಲ್ಲಿ ಶ್ರೀಕೃಷ್ಣನಿಗೆ ಸಂಬಂಧಿಸಿದಂತೆ ವರ್ಣಿಸಿರುವುದರಿಂದ "ಅಸಂಭವಾಲಂಕಾರ"ವೂ. ಶ್ರೀಕೃಷ್ಣನ ಚರಿತ್ರೆಯಲ್ಲಿ ಉತ್ತರೋತ್ತರದ ಉತ್ಕರ್ಷವನ್ನು ವರ್ಣಿಸಿರುವುದರಿಂದ "ಸಾರಾಲಂಕಾರ"ವೂ ಇವೆ. ಲಕ್ಷ್ಯ ಲಕ್ಷಣಗಳನ್ನು ಹಿಂದೆಯೇ ಕೊಡಲಾಗಿದೆ.

ಇಲ್ಲಿ "ಅಕೃತ" ಮತ್ತು "ಅಪನುದ್ಯಾತ್" ಎಂಬ ಎರಡು ಕ್ರಿಯಾಪದಗಳಿವೆ. ಮೊದಲನೆಯದರ ಧಾತ್ವರ್ಥ ಕಾಲಪುರುಷ ವಚನಗಳ ರೂಪಗಳನ್ನು ಹಿಂದೆಯೇ ಕೊಡಲಾಗಿದೆ.

'ಅಪ' ಉಪಸರ್ಗಪೂರ್ವಕ 'ಣುದ – ಪ್ರೇರಣೆ' ಎಂಬ ಧಾತುವಿನ ಸಕರ್ಮಕ ಕರ್ತರಿ ಆಶೀರ್ಲಿಙ್ ಪರಸ್ಮೈಪದಿ ಪ್ರಥಮಪುರುಷ ಏಕವಚನದಲ್ಲಿ "ಅಪನುದ್ಯಾತ್" ಎಂದಾಗಿದೆ.

| | | | |
|---|---|---|---|
| **ರೂಪ:-** | ನುದ್ಯಾತ್ | ನುದ್ಯಾಸ್ತಾಂ | ನುದ್ಯಾಸುಃ |
| | ನುದ್ಯಾಃ | ನುದ್ಯಾಸ್ತಂ | ನುದ್ಯಾಸ್ತ |
| | ನುದ್ಯಾಸಂ | ನುದ್ಯಾಸ್ವ | ನುದ್ಯಾಸ್ಮ ॥ 20 ॥ |

**ರುಕ್ಮಿಣ್ಯಾ ನರ್ಮವಾಕ್ಯೈರರಮತ ಬಹುಭಿಃ ಸ್ತ್ರೀಜನ್ಯೈರ್ಯೋಽಥ ಪುತ್ರಾನ್**
**ಏಕೈಕಸ್ಯಾಂ ಪ್ರಪೇದೇ ದಶದಶ ರುಚಿರಾನ್ ಪೌತ್ರಕಾನಪ್ಯನೇಕಾನ್ ।**
**ಪೌತ್ರಸ್ಯೋದ್ವಾಹಕಾಲೇ ಭೃಶಕುಪಿತಬಲಾದ್ರುಕ್ಮಿಣಂ ಘಾತಯಿತ್ವಾ**
**ನಂದನ್ ಯೋಷಿದ್ಗಣೇನ ಪ್ರತಿಗೃಹಮಬಲಾಪ್ರೀತಿಕಾರೀ ಗತಿರ್ಮೇ ॥ 21 ॥**

**ಅನ್ವಯಾರ್ಥ :-** ಯಃ = ಯಾವ ಕೃಷ್ಣನು, ರುಕ್ಮಿಣ್ಯಾ = ರುಕ್ಮಿಣೀದೇವಿಯಿಂದ ಸಹಿತನಾಗಿ, ನರ್ಮವಾಕ್ಯೈಃ = ಉಪಹಾಸ ವಚನಗಳಿಂದ, ಅರಮತ = ರಮಿಸಿದನು. ಬಹುಭಿಃ = ಬಹುಸಂಖ್ಯಾಕರಾದ, ಸ್ತ್ರಿಜನ್ಯೈಃ = ಸ್ವಸ್ತ್ರೀಜರೊಡನೆ, ಅರಮತ = ರಮಿಸಿದನು, ಅಥ = ಅನಂತರ, ಏಕೈಕಸ್ಯಾಂ = ಬೇರೆ ಬೇರೆಯಾಗಿ ಒಬ್ಬೊಬ್ಬ ಪತ್ನಿಯರಲ್ಲಿಯೂ, ರುಚಿರಾನ್ = ಮನೋಹರರಾದ, ದಶದಶ = ಪ್ರತ್ಯೇಕ ಪ್ರತ್ಯೇಕವಾಗಿ ಹತ್ತು ಹತ್ತು ಸಂಖ್ಯಾಕರಾದ, ಪುತ್ರಾನ್ = ಮಕ್ಕಳನ್ನು ಪ್ರಪೇದೇ = ಹೊಂದಿದನು, ಅನೇಕಾನ್= ಬಹುಸಂಖ್ಯಾಕರಾದ, ಪೌತ್ರಾನ್ = ಮೊಮ್ಮಕ್ಕಳನ್ನು ಸಹ, ಪ್ರಪೇದೇ = ಪಡೆದನು. ಪೌತ್ರಸ್ಯ = ಪ್ರದ್ಯುಮ್ನ ಪುತ್ರನಾದ ಅನಿರುದ್ಧನ, ಉದ್ವಾಹ ಕಾಲೇ = ವಿವಾಹ ಸಮಯದಲ್ಲಿ, ಭೃಶಕುಪಿತಬಲಾತ್ – ಭೃಶ = ಹೆಚ್ಚಾಗಿ, ಕುಪಿತ = ಕೋಪಗೊಂಡ, ಬಲಾತ್ = ಬಲರಾಮನಿಂದ, ರುಕ್ಮಿಣಂ = ರುಕ್ಮಿನಾಮಕನನ್ನು, ಘಾತಯಿತ್ವಾ = ನಾಶಪಡಿಸಿ, ಯೋಷಿದ್ಗಣೇನ = ಸ್ವಸ್ತ್ರೀಸಮೂಹದಿಂದ ಸಹಿತನಾಗಿ, ನಂದನ್ = ಸಂತೋಷಗೊಂಡು, ಪ್ರತಿಗೃಹಂ = ಪ್ರತಿಯೊಬ್ಬ ಪತ್ನಿಯರ ಮನೆಯಲ್ಲೂ ಅಬಲಾಪ್ರೀತಿಕಾರೀ = ಪ್ರಿಯತಮೆಯರಾದ ಸ್ತ್ರೀಯರನ್ನು ಪ್ರೀತಿಪಡಿಸಿದ, ಸಃ = ಶ್ರೀಕೃಷ್ಣನು, ಮೇ = ನನಗೆ, ಗತಿಃ = ಪ್ರಾಪ್ಯನು, ಅಥವಾ ಸರ್ವಾಭಿಷ್ಟಪ್ರದನು (ಸ್ಯಾದಿತಿಶೇಷಃ) ಆಗಲಿ.

**ವಿಗ್ರಹವಾಕ್ಯ :-** ನರ್ಮಣಾಂ ವಾಕ್ಯಾನಿ ನರ್ಮವಾಕ್ಯಾನಿ, ತೈಃ ನರ್ಮವಾಕ್ಯೈಃ । ಸ್ತ್ರಿಯ ಇತಿ ಜನಾಃ ಸ್ತ್ರೀಜನಾಃ ತೈಃ ಸ್ತ್ರೀಜನ್ಯೈಃ । ಏಕಸ್ಯಾಂ ಏಕಸ್ಯಾಂ ಏಕೈಕಸ್ಯಾಮ್ । ಉದ್ವಾಹಸ್ಯಕಾಲಃ ಉದ್ವಾಹಕಾಲಃ, ತಸ್ಮಿನ್ ಉದ್ವಾಹಕಾಲೇ । ಭೃಶಂ ಕುಪಿತಃ ಭೃಶಕುಪಿತ, ಭೃಶಕುಪಿತಶ್ಚಾಸೌ ಬಲಶ್ಚ ಭೃಶಕುಪಿತಬಲಃ, ತಸ್ಮಾತ್ ಭೃಶಕುಪಿತಬಲಾತ್ । ಯೋಷಿತಾಂ ಗಣಃ ಯೋಷಿದ್ಗಣಃ, ತೇನ, ಯೋಷಿದ್ಗಣೇನ । ಪ್ರೀತಿಂ ಕರೋತೀತಿ ಪ್ರೀತಿಕಾರೀ, ಅಬಲಾನಾಂ ಪ್ರೀತಿಕಾರೀ ಅಬಲಾಪ್ರೀತಿಕಾರೀ ॥

**ತಾತ್ಪರ್ಯ :-** ಶ್ರೀಕೃಷ್ಣನು ಒಮ್ಮೆ ಶ್ರೀರುಕ್ಮಿಣೀದೇವಿಯ ಅಂತಃಪುರದಲ್ಲಿ ನಾನಾವಿಧ ಪುಷ್ಪಾದಿಗಳಿಂದಲಂಕೃತವಾದ ದಿವ್ಯ ಹಂಸತೂಲಿಕಾತಲ್ಪದಲ್ಲಿ ಸುಖವಾಗಿ ಕಂಗೊಳಿಸಿ ರತ್ನದಂಡದಿಂದ ಶೋಭಿಸುವ ಕೈಬೀಸಣಿಕೆಯನ್ನು ಹಿಡಿದು ಪ್ರೇಮದಿಂದ ಬೀಸುತ್ತಿರುವ ರುಕ್ಮಿಣಿಯಿಂದ ಸೇವಿತನಾಗಿ ರುಕ್ಮಿಣಿಯೊಡನೆ ನಾನಾವಿಧ ಚಮತ್ಕಾರ ಮತ್ತು ಹಾಸ್ಯ-ವಚನಗಳಿಂದ ಕ್ರೀಡಿಸಿದನು. ಅದರಂತೆಯೇ ಬೇರೆ ಬೇರೆ ಗೃಹಗಳಲ್ಲಿರುವ ಇತರ ಪತ್ನಿಯರೊಡನೆಯೂ ರಮಿಸಿದನು. ಎಲ್ಲ ಪತ್ನಿಯರಲ್ಲೂ, ಒಬ್ಬೊಬ್ಬಳಲ್ಲೂ ಪ್ರತ್ಯೇಕ ಪ್ರತ್ಯೇಕವಾಗಿ ಹತ್ತು ಹತ್ತು ಜನ ಪುತ್ರರನ್ನೂ, ಒಬ್ಬೊಬ್ಬ ಪುತ್ರಿಯನ್ನೂ ಪಡೆದನು. ಪ್ರಾಪ್ತವಯಸ್ಕರಾದ ಎಲ್ಲ ಪುತ್ರರಿಗೂ ವಿವಾಹವನ್ನು ನೆರವೇರಿಸಿದನು. ಆ ಎಲ್ಲ ಪುತ್ರರಿಗೂ ಅನೇಕ ಮಕ್ಕಳು ಜನಿಸಿದರು. ಹೀಗೆ ಪುತ್ರಪೌತ್ರರನ್ನು ಪಡೆದು ಆನಂದಿಸಿದನು. ತನ್ನ ಪೌತ್ರನಾದ ಅನಿರುದ್ಧನಿಗೆ ರುಕ್ಮಿಯ ಮೊಮ್ಮಗಳೊಡನೆ ವಿವಾಹ-ಮಹೋತ್ಸವವನ್ನು ನೆರವೇರಿಸಲು ಬಲರಾಮಾದಿಗಳು ಮತ್ತು ರುಕ್ಮಿಣಿ ಮುಂತಾದವರಿಂದ ಕೂಡಿ ಭೋಜಕಟವೆಂಬ ರುಕ್ಮಿಯ ನಗರಕ್ಕೆ ಹೋಗಿ ವಿವಾಹಮಹೋತ್ಸವವನ್ನು ಜರುಗಿಸಿದನು. ಆ ಸಮಯದಲ್ಲಿ ಕಲಿಂದಾದಿಗಳ ಪ್ರೇರಣೆಯಿಂದ ಬಲರಾಮನನ್ನು ಪರಾಭವಗೊಳಿಸಲೆಂದು ಬಲರಾಮನೊಡನೆ ಪಗಡೆಯಾಟವನ್ನು ರುಕ್ಮಿಯು ಪ್ರಾರಂಭಿಸಿ ಬಲರಾಮ-ನಿಂದ ತಾನೇ ಪರಾಜಿತನಾದನು. ಸೋಲಿನಿಂದ ಅಪಮಾನಿತನಾಗಿ ಕುಪಿತನಾದ ರುಕ್ಮಿಯು ಬಲರಾಮನನ್ನು ಅಪಹಾಸ್ಯ ಮಾಡಲು ಅದರಿಂದ ಕ್ರೋಧಗೊಂಡ ಬಲರಾಮನಿಂದ ಶ್ರೀಕೃಷ್ಣನು ರುಕ್ಮಿಯನ್ನು ಸಂಹಾರಮಾಡಿಸಿ ಪತ್ನೀಸಹಿತನಾದ ಅನಿರುದ್ಧನನ್ನು ರಥದಲ್ಲಿ ಕೂಡಿಸಿ ಸ್ವಜನರೊಡನೆ ದ್ವಾರಕೆಗೆ ಮರಳಿದನು. ಅನಂತರ ಅಲ್ಲಿ ಪ್ರತಿಯೊಬ್ಬ ಪತ್ನಿಯರ ಮನೆಗಳಲ್ಲಿಯೂ ಅವರೊಡನೆ ವಿಹರಿಸುತ್ತಾ ಸರ್ವರನ್ನೂ ಆನಂದಗೊಳಿಸಿದನು. ಮುಂತಾದ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುವುದು. ಇಂಥ ಶ್ರೀಕೃಷ್ಣನು ನನಗೆ ಪ್ರಾಪ್ಯನಾಗಲಿ. ನನಗೆ ಸರ್ವಾಭೀಷ್ಟಪ್ರದನಾಗಲಿ ಎಂದು ಶ್ರೀಗುರುರಾಜರು ಪ್ರಾರ್ಥಿಸಿದ್ದಾರೆ.

**ಅಲಂಕಾರಗಳು –** ಇಲ್ಲಿಯೂ ''ಸಾರಾಲಂಕಾರ''ವಿದೆ.

ಇಲ್ಲಿ ''ಅರಮತ'' ಮತ್ತು ''ಪ್ರಪೇದೇ'' ಎಂಬ ಎರಡು ಕ್ರಿಯಾಪದಗಳಿವೆ.

''ರಮ ಕ್ರೀಡಾಯಾಂ'' ಎಂಬ ಧಾತುವಿನ ಸಕರ್ಮಕ ಕರ್ತರಿ ಲಙ್ ಆತ್ಮನೇಪದಿ ಪ್ರಥಮ ಪುರುಷ ಏಕವಚನದಲ್ಲಿ ''ಅರಮತ'' ಎಂದಾಗಿದೆ.

| | | | | |
|---|---|---|---|---|
| **ರೂಪ :-** | ಅರಮತ | ಅರಮೇತಾಂ | ಅರಮಂತ | |
| | ಅರಮಥಾಃ | ಅರಮೇಥಾಂ | ಅರಮಧ್ವಂ | |
| | ಅರಮೇ | ಅರಮಾವಹಿ | ಅರಮಾಮಹಿ | ॥ 21 ॥ |

**ನಾನಾರತ್ನಪ್ರದೀಪ್ತಾಸಮವಿಭವಯುತದ್ವ್ಯಷ್ಟಸಾಹಸ್ರಕಾಂತಾ-**
**ಗೇಹೇಷ್ವರ್ಷ್ಣೆ ಶಯಾನಃ ಕ್ವ ಚ ಜಪಮೃಗಯಾದೀನಿ ಕುರ್ವನ್ ಕ್ವಚಿಚ್ಚ ।**
**ದೀವ್ಯನ್ನಕ್ಷೈರ್ಬ್ರುವಾಣಃ ಪ್ರವಚನಮಪರೈರ್ಮಂತ್ರಯನ್ನೇವಮಾದಿ-**
**ವ್ಯಾಪಾರಾನ್ನಾರದಸ್ಯ ಪ್ರತಿಸದನಮಹೋ ದರ್ಶಯನ್ ನಃ ಸ ಪಾಯಾತ್ ॥ 22 ॥**

**ಅನ್ವಯಾರ್ಥ :-** ನಾನಾರತ್ನಪ್ರದೀಪ್ತಾಸಮವಿಭವಯುತ ದ್ವ್ಯಷ್ಟಸಾಹಸ್ರ ಕಾಂತಾಗೇಹೇಷು – ನಾನಾರತ್ನ = ನಾನಾವಿಧವಾದ ರತ್ನಗಳಿಂದ, ಪ್ರದೀಪ್ತ = ಪ್ರಕಾಶಿತವಾದ, ಅಸಮ = ಅಸದೃಶವಾದ, ವಿಭವ = ಐಶ್ವರ್ಯಗಳಿಂದ,

ಯುತ = ಯುಕ್ತವಾದ, ದ್ವ್ಯಷ್ಟಸಾಹಸ್ರ = ಹದಿನಾರುಸಹಸ್ರ ಸಂಖ್ಯಾಕವಾದ, ಕಾಂತಾ = ಪತ್ನಿಯರ, ಗೇಹೇಷು = ಮನೆಗಳಲ್ಲಿ, ಅಶ್ನನ್ = ಭೋಜನ ಮಾಡಿ, ಶಯಾನಃ = ಮಲಗಿ, ಜಪಮೃಗಯಾದೀನಿ – ಜಪ = ಗಾಯಿತ್ರ್ಯಾದಿ ಮಂತ್ರ ಜಪವನ್ನು, ಮೃಗಯಾದೀನಿ = ಕ್ರೀಡಾರ್ಥವಾಗಿ ವನಕ್ಕೆ ಬೇಟೆಗಾಗಿ, ಹೊರಡುವುದೇ ಮುಂತಾದ ಚರಿತ್ರೆಗಳನ್ನು, ಕುರ್ವನ್ = ಮಾಡುತ್ತಾ. ಕ್ವಚಿಚ್ಚ = ಕೆಲಪತ್ನಿಯರ ಮನೆಯಲ್ಲಿ, ಅಕ್ಷೈಃ ದೀವ್ಯನ್ = ದ್ಯೂತ ಸಾಧನಗಳಿಂದ ಪಗಡೆಯಾಟವನ್ನಾಡಿ. ಪ್ರವಚನಂ = ವೇದ ವ್ಯಾಖ್ಯಾನ – ಉಪನ್ಯಾಸಾದಿಗಳನ್ನು, ಬ್ರುವಾಣಃ = ಮಾಡುತ್ತಾ, ಅಪರೈಃ = ಉದ್ಧವಾದಿಗಳಿಂದ ಸಹಿತನಾಗಿ, ಮಂತ್ರಯನ್ = ರಾಜಕೀಯ ಮಂತ್ರಾಲೋಚನೆಮಾಡಿ, ಏವಮಾದಿ ವ್ಯಾಪಾರಾನ್ – ಏವಮಾದಿ = ಇವು ಮತ್ತು ಶಿಶುಪಾಲನಾದಿ ತನ್ನ ಅನೇಕ ವಿಧವಾದ, ವ್ಯಾಪಾರಾನ್ = ಕಾರ್ಯಗಳನ್ನು. ನಾರದಸ್ಯ = ದೇವರ್ಷಿಗಳಾದ ನಾರದ ಮಹರ್ಷಿಗಳಿಗೆ, ಪ್ರತಿಸದನಂ = ತನ್ನ ಪತ್ನಿಯರ ಪ್ರತಿಯೊಂದು ಗೃಹಗಳಲ್ಲಿಯೂ, ದರ್ಶಯನ್ = ತೋರಿಸಿದಂಥ, ಸಃ = ಶ್ರೀಕೃಷ್ಣನು. ನಃ = ನಮ್ಮಗಳನ್ನು ಪಾಯಾತ್ = ಕಾಪಾಡಲಿ. ಅಹೋ = ಆಶ್ಚರ್ಯವು.

**ವಿಗ್ರಹವಾಕ್ಯ :–** ನಾನಾರತ್ನೈಃ ಪ್ರದೀಪ್ತಾನಿ – ನಾನಾರತ್ನಪ್ರದೀಪ್ತಾನಿ। ನ ಸಮಃ ಅಸಮಃ, ಅಸಮಶ್ಚಾಸೌ ವಿಭವಶ್ಚ ಅಸಮವಿಭವಃ, ಅಸಮವಿಭವೇನ ಯುತಾನಿ – ಅಸಮವಿಭವಯುತಾನಿ। ದ್ವಿಗುಣಿತಾಃ ಅಷ್ಟೌ – ದ್ವ್ಯಷ್ಟೌ, ದ್ವ್ಯಷ್ಟಾನಾಂ ಸಾಹಸ್ರಂ – ದ್ವ್ಯಷ್ಟಸಾಹಸ್ರಂ, ದ್ವ್ಯಷ್ಟಸಾಹಸ್ರಂ ಕಾಂತಾಃ – ದ್ವ್ಯಷ್ಟಸಾಹಸ್ರಕಾಂತಾಃ – ತಾಸಾಂ ಗೇಹಾನಿ ದ್ವ್ಯಷ್ಟಸಾಹಸ್ರ-ಕಾಂತಾಗೇಹಾನಿ, ನಾನಾರತ್ನಪ್ರದಿಪ್ತಾನಿ ಚ ತಾನಿ. ಅಸಮವಿಭವಯುತಾನಿ ಚ ನಾನಾರತ್ನಪ್ರದೀಪ್ತಾಽಸಮವಿಭವಯುತಾನಿ. ನಾನಾರತ್ನ ಪ್ರದೀಪ್ತಾಽಸಮವಿಭವಯುತಾನಿ ಚ ತಾನಿ ದ್ವ್ಯಷ್ಟಸಾಹಸ್ರಕಾಂತಾಗೇಹಾನಿ – ನಾನಾ ರತ್ನಪ್ರದೀಪ್ತಾಽಸಮ-ವಿಭವಯುತದ್ವ್ಯಷ್ಟಸಾಹಸ್ರಕಾಂತಾಗೇಹಾನಿ – ತೇಷು । ಜಪ ಮೃಗಯಾ ಆದೀನಿ ಯೇಷಾಂ ತಾನಿ ಜಪಮೃಗಯಾ-ದೀನಿ। ಸದನೇ –ಸದನೇ ಪ್ರತಿಸದನಂ.

**ತಾತ್ಪರ್ಯ :–** ಶ್ರೀಹರಿಯು ದೋಷದೂರ ಅನಂತಕಲ್ಯಾಣಗುಣಪರಿಪೂರ್ಣ, ರಮಾ ಬ್ರಹ್ಮ ರುದ್ರೇಂದ್ರಾದಿ ಸಂಸೇವ್ಯ, ಸರ್ವೋತ್ತಮ, ಸರ್ವತ್ರವ್ಯಾಪ್ತ, ಅಚಿಂತ್ಯಾದ್ಭುತ ಶಕ್ತಿಯುಕ್ತ, ಅವನ ಮಹಿಮಾದಿಗಳನ್ನು ಸಾಕಲ್ಯೇನ ತಿಳಿಯಲು ರಮಾದೇವಿಯೂ ಅಶಕ್ತಳು ಎಂಬಿವೇ ಮುಂತಾದ ಶ್ರೀಹರಿತತ್ವಗಳು, ಮಹಿಮಾದಿಗಳನ್ನು ಬಲ್ಲ ದೇವರ್ಷಿಗಳಾದ ನಾರದರು ಸಾಕ್ಷಾನ್ನಾರಾಯಣಾವತಾರಿಯಾಗಿ, ಭೂ ಭಾರಹರಣ, ಧರ್ಮಸಂರಕ್ಷಣಾದಿಗಳಿಗಾಗಿ ಶ್ರೀಕೃಷ್ಣಾಭಿಧಾನದಿಂದ ಯದುಕುಲದಲ್ಲಿ ಅವತರಿಸಿದ್ದು ಅನೇಕ ತನ್ನ ಅಸದೃಶಕಾರ್ಯಗಳಿಂದ ತಾನೇ ಪುರುಷೋತ್ತಮನೆಂಬುದನ್ನು ತೋರಿಸಿ-ಕೊಟ್ಟಿದ್ದರೂ, ಉದ್ಧಾರಕಪ್ರಭುವು ತಮ್ಮೊಡನಿದ್ದರೂ ಅವನನ್ನು ಸೇವಿಸಿ ಅವನ ಪ್ರಸಾದಕ್ಕೆ ಪಾತ್ರರಾಗಿ ಉದ್ಧೃತರಾಗದೇ ಪರಿತಪಿಸುತ್ತಿರುವ ಸಜ್ಜನರಿಗೆ ಅವನ ಮಹಿಮೆಯನ್ನು ತೋರಿಕೊಟ್ಟು ಲೋಕಶಿಕ್ಷಾ ಮಾಡುವ ಮಹೋದ್ದೇಶದಿಂದ ಶ್ರೀಕೃಷ್ಣನ ಮಹಿಮೆಯನ್ನರಿತಿದ್ದರೂ ಅವನನ್ನು ಪರೀಕ್ಷಿಸುವವರಂತೆ ನಟಿಸಲು, ಒಮ್ಮೆ ದ್ವಾರಕೆಗೆ ಬಂದು ಶ್ರೀಕೃಷ್ಣನ ಹದಿನಾರು ಸಾವಿರ ಪತ್ನಿಯರ ಮನೆಗೆ ಭೇಟಿ ಕೊಡಲು ಹೊರಟರು.

ನಾನಾವಿಧ ನವರತ್ನಗಳಿಂದ ಕಂಗೊಳಿಸುವ ಅಸದೃಶ ವೈಭವಗಳಿಂದ ಪರಿಪೂರ್ಣವಾದ ಶ್ರೀಕೃಷ್ಣಪತ್ನಿಯರ ಗೃಹ-ಗಳಿಗೆ ಶ್ರೀಕೃಷ್ಣದರ್ಶನಾಕಾಂಕ್ಷಿಗಳಾಗಿ ತೆರಳಿದ ನಾರದರಿಗೆ ಎಲ್ಲ ಗೃಹಗಳಲ್ಲಿಯೂ ಶ್ರಿಕೃಷ್ಣನು ವಿವಿಧ ಕಾರ್ಯಾಸಕ್ತನಾಗಿ ದರ್ಶನವಿತ್ತನು. ಒಬ್ಬ ಪತ್ನಿಯ ಮನೆಯಲ್ಲಿ ಭೋಜನ ಮಾಡುತ್ತಿದ್ದರೆ, ಮತ್ತೊಬ್ಬಳ ಮನೆಯಲ್ಲಿ ಹಂಸತೂಲಿಕಾತ್ಪಲದಲ್ಲಿ ಪವಡಿಸಿ ಪತ್ನಿಯಿಂದ ಸೇವೆಗೊಳ್ಳುತ್ತಿದ್ದನು. ಇನ್ನೊಬ್ಬಳ ಗೃಹದಲ್ಲಿ ಸಂಧ್ಯಾಸಕ್ತನಾಗಿ ಗಾಯತ್ರ್ಯಾದಿ ಮಂತ್ರಜಪಾನುಷ್ಠಾನ ಪರನಾಗಿದ್ದರೆ, ಮತ್ತೋರ್ವಳ ಸದನದಲ್ಲಿ ಮೃಗಯಾವಿಹಾರ ಮಾಡಲು ಸಿದ್ಧನಾಗಿ ಹೊರಟು ನಿಂತಿದ್ದನು. ನಾರದರು ಅಚ್ಚರಿಯಿಂದ ಮುಂದಿನ ಮನೆಗೆ ಹೊರಟರೆ ಅಲ್ಲಿ ಪತ್ನಿಯೊಡನೆ ಪಗಡೆಯಾಟದಲ್ಲಿ ತಲ್ಲೀನನಾಗಿಯೂ, ಮಗದೊಂದು

ಗೃಹದಲ್ಲಿ ಆತ್ಮೀಯರನ್ನು ಕೂಡಿಸಿಕೊಂಡು, ವೇದವ್ಯಾಖ್ಯಾನೋಪನ್ಯಾಸಾದಿಗಳನ್ನು ಮಾಡುತ್ತಲೂ, ಇನ್ನಿತರ ಗೃಹಗಳಲ್ಲಿ ಉದ್ಧವಾದಿ ಯಾದವವೀರರೊಡನೆ ರಾಜಕೀಯ ಮಂತ್ರಾಲೋಚನೆ ಇತರ ವಿಚಾರವಿನಿಮಯಾದಿಗಳಲ್ಲಿ ಆಸಕ್ತನಾಗಿಯೂ ಮತ್ತು ಬೇರೆ ಮನೆಗಳಲ್ಲಿ, ಶಿಶುಪಾಲನ ಲಾಲನಾದಿಗಳೇ ಮೊದಲಾದ ಕಾರ್ಯಗಳಲ್ಲಿ ತೊಡಗಿ ಹೀಗೆ ಪ್ರತಿಯೊಂದು ಮನೆಗಳಲ್ಲಿಯೂ ಒಂದೊಂದು ವ್ಯಾಪಾರದಲ್ಲಿ ಆಸಕ್ತನಾಗಿ ಕಂಗೊಳಿಸಿ ಶ್ರೀಕೃಷ್ಣನು ಸಾಮಾನ್ಯ ಮಾನವನಲ್ಲ, ಸರ್ವತ್ರ-ವ್ಯಾಪ್ತನಾದ ಪರಮಾತ್ಮನೆಂದು, ತಮ್ಮ ಅನುಭವದಿಂದ ಲೋಕಕ್ಕೆ ಪ್ರದರ್ಶಿಸಲು ಬಂದ ನಾರದರಿಗೆ ತನ್ನ ಅದ್ಭುತ ಲೀಲಾವಿಲಾಸಗಳನ್ನು ತೋರಿ ಆನಂದಗೊಳಿಸಿದನು ಮುಂತಾದ ಕಥಾ ಭಾಗವು ಈ ಪದ್ಯದಿಂದ ಸೂಚಿತವಾಗುವುದು. ಇಂತಹ ಮಹಾಮಹಿಮನಾದ ಶ್ರೀಕೃಷ್ಣನು ನಮ್ಮನ್ನೆಲ್ಲಾ ಕಾಪಾಡಲಿ ಎಂದು ಶ್ರೀ ಗುರುಸಾರ್ವಭೌಮರು ಪ್ರಾರ್ಥಿಸಿದ್ದಾರೆ.

**ಅಲಂಕಾರ :-** ಇಲ್ಲಿ 'ವಿಶೇಷಾಲಂಕಾರ' ''ಸಾರಾಲಂಕಾರ'' ಎಂಬ ಎರಡು ಅಲಂಕಾರಗಳಿವೆ.

ನಾರದರ ಪ್ರಾರ್ಥನೆಯಂತೆ ಶ್ರೀ ಕೃಷ್ಣನು ತನ್ನ ಎಲ್ಲ ಪತ್ನಿಯರ ಮನೆಗಳಲ್ಲಿ ಬೇರೆ ಬೇರೆ ವ್ಯಾಪಾರಗಳಲ್ಲಿ ತಲ್ಲೀನನಾಗಿರುವುದನ್ನು ದರ್ಶನ ಮಾಡಿಸಿದನೆಂದು ವರ್ಣಿಸಿರುವುದರಿಂದ ವಿಶೇಷಾಲಂಕಾರವು, ಲಕ್ಷ್ಯ ಲಕ್ಷಣಗಳನ್ನು ಹಿಂದೆಯೇ ಕೊಡಲಾಗಿದೆ.

ಇಲ್ಲಿ ''ಪಾಯಾತ್'' ಎಂಬ ಕ್ರಿಯಾಪದವಿದೆ. ಇದನ್ನು ಈ ಹಿಂದೆಯೇ ಕೊಡಲಾಗಿದೆ. ॥ 22 ॥

**ಪ್ರಾತರ್ಧ್ಯಾಯನ್ ಪ್ರಸನ್ನಃ ಕೃತನಿಜವಿಹಿತಃ ಸತ್ಸಭಾಂ ಪ್ರಾಪ್ಯ ಕೃಷ್ಣೋ**
**ದೂತಂ ರಾಜ್ಞಾಂ ಪ್ರತೋಷ್ಯಾಮರಮುನಿವಿದಿತಾಶೇಷಕೃತ್ಯಃ ಪ್ರಯಾಸೀತ್ ।**
**ಶಕ್ರಪ್ರಸ್ಥಂ ಚಮೂಭಿರ್ಬಹುವಿಭವಯುತಂ ಬಂಧುಭಿರ್ಮಾನಿತೋಽಯಂ**
**ಭೀಮೇನಾಪಾತ್ಯ ಬಾರ್ಹದ್ರಥಮಥ ನೃಪತೀನ್ಮೋಚಯನ್ ಮೇ ಪ್ರಸೀದೇತ್ ॥ 23 ॥**

**ಅನ್ವಯಾರ್ಥ :-** ಕೃಷ್ಣಃ = ಶ್ರೀಕೃಷ್ಣ ಪರಮಾತ್ಮನು. ಪ್ರಾತಃ = ಅರುಣೋದಯಕಾಲದಲ್ಲಿ, ಪ್ರಸನ್ನಃ = ಪ್ರಸನ್ನಾಂತಃಕರಣನಾಗಿ, ಧ್ಯಾಯನ್ (ಸ್ವಾತ್ಮಾನಮಿತಿಶೇಷಃ) = ತನ್ನನ್ನು ಧ್ಯಾನಮಾಡಿ, ಕೃತನಿಜವಿಹಿತಃ - ಕೃತ =ಆಚರಿಸಲ್ಪಟ್ಟ, ನಿಜ ತನಗೆ, ವಿಹಿತಃ = ವಿಹಿತವಾದ, ವಿಧ್ಯುಕ್ತವಾದ ಸ್ನಾನಸಂಧ್ಯಾವಂದನಾದಿ ಕಾರ್ಯವುಳ್ಳವನಾಗಿ, ಸತ್ಸಭಾಂ =ನಿರ್ದುಷ್ಟವಾದ ರಾಜಸಭೆಯನ್ನು, ಪ್ರಾಪ್ಯ = ಹೊಂದಿ, ರಾಜ್ಞಾಂ = ರಾಜರುಗಳ, ದೂತಂ = ದೂತನಾಗಿ ಬಂದ ಸೇವಕನನ್ನು, ಪ್ರತೋಷ್ಯ = ಸಂತೋಷಪಡಿಸಿ, ಅಮರಮುನಿವಿದಿತಾಶೇಷಕೃತ್ಯಃ - ಅಮರಮುನಿ = ದೇವರ್ಷಿಗಳಾದ ನಾರದರಿಂದ. ವಿದಿತ = ವಿಜ್ಞಾಪಿಸಲ್ಪಟ್ಟ , ಅಶೇಷ = ಸಮಸ್ತವಾದ, ಕೃತ್ಯಃ = ಕರ್ತವ್ಯವುಳ್ಳವನಾಗಿ, ಚಮೂಭಿಃ = ಸೈನ್ಯಗಳಿಂದ ಸಹಿತನಾಗಿ, ಬಹುವಿಭವಯುತಂ = ಬಹುವಿಧೈಶ್ವರ್ಯಾದಿ ವೈಭವಗಳಿಂದ ಯುಕ್ತವಾದ, ಶಕಪ್ರಸ್ಥಂ = ಪಾಂಡವರ ರಾಜಧಾನಿಯಾದ ಇಂದ್ರಪ್ರಸ್ಥಕ್ಕೆ, ಪ್ರಯಾಸೀತ್ = ಹೋದನು. ಬಂದುಭಿಃ = ಬಾಂಧವರಾದ ಪಾಂಡವರಿಂದ, ಮಾನಿತಃ = ಪೂಜಿಸಲ್ಪಟ್ಟವನಾಗಿ, ಬಾರ್ಹದ್ರಥಂ = ಬೃಹದ್ರಥನ ಮಗನಾದ ಜರಾಸಂಧನನ್ನು, ಭೀಮೇನ = ಭೀಮನಿಂದ, ಅಪಾತ್ಯ = ಸಂಹಾರ ಮಾಡಿಸಿ. ಅಥ = ಅನಂತರ, ನೃಪತೀನ್ = ರಾಜರುಗಳನ್ನು, ಮೋಚಯನ್ = ನಿಗಡಬಂಧನದಿಂದ (ಕಾರಾಗೃಹದಿಂದ) ಬಿಡಿಸಿದನು. ಅಯಂ=ಅಂಥ ಶ್ರೀಕೃಷ್ಣನು, ಮೇ = ನನಗೆ, ಪ್ರಸೀದೇತ್ = ಪ್ರಸನ್ನನಾಗಲಿ.

**ವಿಗ್ರಹವಾಕ್ಯ :-** ನಿಜಾನಿ ಚ ತಾನಿ ವಿಹಿತಾನಿ ನಿಜವಿಹಿತಾನಿ ಕೃತಾನಿ ನಿಜವಿಹಿತಾನಿ ಯೇನ ಸಃ ಕೃತನಿಜವಿಹಿತಃ ॥ ಸತೀ ಚ ಸಾ ಸಭಾ ಚ ಸತ್ಸಭಾ, ತಾಮ್ । ಅಮರಾಣಾಂ ಮನಿಃ ಅಮರ ಮುನಿಃ ತೇನ ವಿದಿತಾನಿ, ಅಮರಮುನಿವಿದಿತಾನಿ

ಅಶೇಷಾಣಿ ಚ ತಾನಿ ಕೃತ್ಯಾನಿ ಚ ಅಶೇಷಕೃತ್ಯಾನಿ, ಅಮರಮುನಿವಿದಿತಾನಿ ಅಶೇಷ ಕೃತ್ಯಾನಿ ಯೇನ ಸಃ ಅಮರ ಮುನಿವಿದಿತಾಶೇಷಕೃತ್ಯಃ । ಬಹವಶ್ಚ ತೇ ವಿಭವಾಶ್ಚ ಬಹುವಿಭವಾಃ ತೈಃ ಯುತಂ ಬಹುವಿಭವಯುತಂ ತತ್ । ಬೃಹದ್ರಥಸ್ಯ ಅಪತ್ಯಂ ಪುಮಾನ್ ಇತಿ ಬಾರ್ಹದ್ರಥಃ ತಮ್ ।

**ತಾತ್ಪರ್ಯ :-** ಶ್ರೀಕೃಷ್ಣನು ಒಂದು ದಿನ ಅರುಣೋದಯ ಕಾಲದಲ್ಲಿ ಹಂಸತೂಲಿಕಾತಲ್ಪದಿಂದೆದ್ದು ಪಾದ-ಪ್ರಕ್ಷಾಲನಾದಿಗಳನ್ನು ಮುಗಿಸಿ ಪ್ರಸನ್ನಾಂತಃಕರಣನಾಗಿ "ಏಕಂ ಪರಂ ಜ್ಯೋತಿಃ" ಇತ್ಯಾದಿಯಾಗಿ ಉಕ್ತವಾದ ಅನೇಕ ಗುಣದಿಂದ ಯುಕ್ತನಾದುದರಿಂದ ಪರಬ್ರಹ್ಮ ಸ್ವರೂಪಿಯೂ, ಸೂರ್ಯಾಂತರ್ಗತನೂ ಆದ ತನ್ನನ್ನೇ ತಾನೂ ಧ್ಯಾನಮಾಡಿ, ಸ್ನಾನ, ಸಂಧ್ಯಾವಂದನೆ – ಔಪಾಸನಾದಿ ವಿಧ್ಯುಕ್ತ ಸ್ವಾಶ್ರಮೋಚಿತವಾದ ಕರ್ಮಗಳನ್ನು ನೆರವೇರಿಸಿ "ಸುಧರ್ಮ" ಎಂಬ ನಿರ್ದುಷ್ಟವಾದ ದಿವ್ಯ ಸಭೆಗೆ ಬಂದು ಅಲ್ಲಿ ವಿರಾಜಮಾನವಾದ ಶ್ರೇಷ್ಠ ಸಿಂಹಾಸನದಲ್ಲಿ ಮಂಡಿಸಿ ಸಕಲ ಯಾದವ-ವೀರರಿಂದ ಸೇವಿತನಾಗಿ ಕಂಗೊಳಿಸಿದನು.

ಹಿಂದೆ ಪ್ರಬಲನಾದ ಜರಾಸಂಧನು ಯುದ್ಧದಲ್ಲಿ 22,800 ಜನ ರಾಜರನ್ನು ಗದ್ದು ಅವರನ್ನು ತಾನು ನೆರವೇರಿಸಲಿದ್ದ "ರುದ್ರಯಾಗ" ದಲ್ಲಿ ಪಶುತ್ವೇನ ಬಲಿ ಕೊಡಲು ನಿಶ್ಚಯಿಸಿ ಅವರೆಲ್ಲರನ್ನೂ ಮತ್ತು 16,100 ಜನ ರಾಜಕುವರಿಯರನ್ನು ಗಿರಿದುರ್ಗದ ಕಾರಾಗೃಹದಲ್ಲಿ ಬಂಧಿಸಿಟ್ಟಿದ್ದನು. ಆ ಸಕಲ ರಾಜರು ಜರಾಸಂಧನಿಂದ ತಮಗೊದಗಿದ ದುರ್ಗತಿಯನ್ನು ತಿಳುಹಿಸಿ, ತಮ್ಮನ್ನು ಜರಾಸಂಧನ ಬಂಧನದಿಂದ ಬಿಡುಗಡೆಮಾಡಿ ಕಾಪಾಡಬೇಕೆಂದು ಶ್ರೀಕೃಷ್ಣನಲ್ಲಿ ವಿಜ್ಞಾಪಿಸಲು ದೂತನೊಬ್ಬನನ್ನು ಕೃಷ್ಣನ ಬಳಿಗೆ ಕಳುಹಿಸಿದರು. ಆ ದೂತನು ಕೃಷ್ಣನಲ್ಲಿ ಸಮಸ್ತ ವಿಚಾರವನ್ನೂ ನಿವೇದಿಸಲು ಅದನ್ನು ಸಾವಧಾನದಿಂದ ಆಲಿಸಿ ರಾಜರನ್ನು ಬಂಧಮುಕ್ತರನ್ನಾಗಿ ಮಾಡುವುದಾಗಿ ಅಭಯವಿತ್ತು ದೂತನನ್ನು ಸಂತೋಷಪಡಿಸಿ ಕಳುಹಿಸಿಕೊಟ್ಟನು.

ಅದೇ ಸಮಯಕ್ಕೆ ಸರಿಯಾಗಿ ದೇವರ್ಷಿ ನಾರದರು ಬಂದು ಇಂದ್ರಪ್ರಸ್ಥದಲ್ಲಿರುವ ಪಾಂಡವರ ಯೋಗಕ್ಷೇಮ ಹಾಗೂ ಅವರು ಕೈಗೊಳ್ಳಲಿರುವ ರಾಜಸೂಯ ಯಾಗದ ವಿಷಯ ಮುಂತಾದುವನ್ನು ಕೃಷ್ಣನಲ್ಲಿ ವಿಜ್ಞಾಪಿಸಿ ಪಾಂಡವರ ರಾಜಸೂಯ ಯಾಗವನ್ನು ಯಶಸ್ವಿಯಾಗಿ ನೆರವೇರಿಸಿಕೊಡಲು ಇಂದ್ರಪ್ರಸ್ಥಕ್ಕೆ ದಯಮಾಡಿಸಬೇಕೆಂದು ಪ್ರಾರ್ಥಿಸಲು ನಾರದರ ಮಾತನ್ನು ಮನ್ನಿಸಿ ಪಾಂಡವರ ಅಭಿಲಾಷೆಯನ್ನು ಪೂರ್ಣ ಮಾಡುವುದಾಗಿ ಹೇಳಿ ಅವರನ್ನು ಕಳುಹಿಸಿಕೊಟ್ಟು ಅನಂತರ 16,100 ಜನ ಪತ್ನಿಯರಿಂದಲೂ, ಪುತ್ರಪೌತ್ರಾದಿಗಳಿಂದಲೂ ಅನೇಕ ಸೇನೆಗಳಿಂದಲೂ ಯುಕ್ತನಾಗಿ ಸುವರ್ಣಮಯ ಪಾಲಕಿ, ಮೇನೆ, ರಥ ಮುಂತಾದ ವಾಹನಗಳಲ್ಲಿ ಕುಳಿತು ಸಕಲ ಕಾಮಗಳಿಂದ ಪರಿಪೂರ್ಣವಾದ ಇಂದ್ರಪ್ರಸ್ಥಪುರಕ್ಕೆ ಬಂದು ಅಲ್ಲಿ ಪಾಂಡವರಿಂದ ಪೂಜಿತನಾದನು.

ಅನಂತರ ರಾಜಸೂಯಯಾಗವು ನಿರ್ವಿಘ್ನವಾಗಿ ನಡೆಯಲು ಅಡ್ಡಿಯಾಗಿರುವ ಜರಾಸಂಧನನ್ನು ನಿರ್ಮೂಲ ಮಾಡಲು ಭೀಮಾರ್ಜುನರೊಡನೆ ಬ್ರಾಹ್ಮಣವೇಷದಿಂದ ಜರಾಸಂಧನ ನಗರಕ್ಕೆ ಬಂದು. ಅಲ್ಲಿ 15 ದಿನ ಪರ್ಯಂತ ಭೀಮ, ಜರಾಸಂಧರಿಗೆ ನಡೆದ ದ್ವಂದ್ವಯುದ್ಧದಲ್ಲಿ ಭೀಮನಿಂದ ಜರಾಸಂಧನ ಸಂಹಾರಮಾಡಿಸಿ ಅವನು ಬಂಧಿಸಿಟ್ಟಿದ್ದ ಬಾಂಧವರಾದ ಸಕಲ ರಾಜರನ್ನೂ ಬಂಧನದಿಂದ ಮುಕ್ತಗೊಳಿಸಿ ಅದರಿಂದ ಸ್ತುತ್ಯನಾಗಿ ಅವರಿಗೆ ಮಂಗಳಸ್ನಾನ ಮಾಡಿಸಿ ವಿವಿಧಾಭರಣಾದಿ ಭಾಗ್ಯಗಳನ್ನು ಅವರಿಗಿತ್ತು 'ಆಯಾ ದೇಶಗಳಿಗೆ ಅವರವರು ಹೋಗಲು ಅಪ್ಪಣೆಯಿತ್ತು ಕಳುಹಿಸಿಕೊಟ್ಟು ಸರ್ವರನ್ನೂ ಶ್ರೀಕೃಷ್ಣನು ಆನಂದಗೊಳಿಸಿದನು ಮುಂತಾದ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುವುದು. ಅಂಥ ಶ್ರೀಕೃಷ್ಣನು ನನಗೆ ಪ್ರಸನ್ನನಾಗಲಿ ಎಂದು ಶ್ರೀ ಗುರುರಾಜರು ಪ್ರಾರ್ಥಿಸಿದ್ದಾರೆ.

**ಅಲಂಕಾರಗಳು :-** ಇಲ್ಲಿ ''ಸಾರಾಲಂಕಾರ,'' ''ಅಸುಭವಾಲಂಕಾರ'' ಮತ್ತು ''ಹೇತ್ವಲಂಕಾರ''ಗಳೆಂಬ ಮೂರು ಅಲಂಕಾರಗಳಿವೆ. 'ಸಾರಾಲಂಕಾರ' ದ ಲಕ್ಷ್ಯಲಕ್ಷಣಗಳನ್ನು ಹಿಂದೆಯೇ ಕೊಟ್ಟಿದೆ.

ವಧಿಸಲು ಅಸಂಭವನೀಯನಾದ ಜರಾಸಂಧನನ್ನು ಭೀಮಸೇನನು ವಧಿಸಿದನು ಎಂದು ವರ್ಣಿಸಿರುವುದರಿಂದ ''ಅಸಂಭವಾಲಂಕಾರವೂ'' ರಾಜಸೂಯಯಾಗದ ನೆರವೇರಿಕೆಗೆ ಜರಾಸಂಧ ವಧೆಯನ್ನು ಹೇತುವನ್ನಾಗಿ ವರ್ಣಿಸಿರು-ವುದರಿಂದ ''ಹೇತ್ವಾ ಲಂಕಾರವೂ'' ಇವೆ.

''ಅಸಂಭವಾಲಂಕಾರ'' ದ ಲಕ್ಷ್ಯ ಲಕ್ಷಣಗಳನ್ನು ಹಿಂದೆಯೇ ಕೊಟ್ಟಿದೆ.

**ಹೇತ್ವಲಂಕಾರದ ಲಕ್ಷಣ:** ''ಹೇತೋರ್ಹೇತುಮತಾಸಾರ್ಧಂ ವರ್ಣನಂ ಹೇತುರುಚ್ಯತೇ ।''

**ಉದಾ:** ಅಸಾ ಉದೇತಿ ಶೀತಾಂಶುಃ ಮಾನಚ್ಛೇದಾಯ ಸಂಭ್ರುವಾಮ್ ॥

ಇಲ್ಲಿ ''ಪ್ರಯಾಸೀತ್'' ಮತ್ತು ''ಪ್ರಸೀದೇತ್'' ಎಂಬ ಎರಡು ಕ್ರಿಯಾಪದಗಳಿವೆ. ''ಪ್ರ'' - ಉಪಸರ್ಗಪೂರ್ವಕ ''ಯಾ - ಪ್ರಾಪಣೇ'' ಎಂಬ ಧಾತುವಿನ ಸಕರ್ಮಕ ಕರ್ತರಿ ಲುಙ್ ಪರಸ್ಮೈಪದಿ ಪ್ರಥಮಪುರುಷ ಏಕವಚನದಲ್ಲಿ ''ಪ್ರಯಾಸೀತ್'' ಎಂದಾಗಿದೆ.

| | | | |
|---|---|---|---|
| **ರೂಪ :-** | ಅಯಾಸೀತ್ | ಅಯಾಸಿವ್ಯಾಂ | ಅಯಾಸಿಷುಃ |
| | ಅಯಾಸೀ | ಅಯಾಸಿಷ್ಠಂ | ಅಯಾಸಿಷ್ಟ |
| | ಅಯಾಸಿಷಂ | ಅಯಾಸಿಷ್ವ | ಅಯಾಸಿಷ್ಮ |

ಎರಡನೆಯದು ''ಪ್ರ'' ಉಪಸರ್ಗಪೂರ್ವಕ ''ಷದ್ಲ್ರು - ವಿಶರಣಗತ್ಯವಸಾದನೇಷು'' ಎಂಬ ಧಾತುವಿನ ಸಕರ್ಮಕ ಕರ್ತರಿ ವಿಧಿ-ಲಿಙ್ ಪರಸ್ಮೈಪದಿ ಪ್ರಥಮಪುರುಷ ಏಕವಚನದಲ್ಲಿ ''ಪ್ರಸೀದೇತ್'' ಎಂದಾಗಿದೆ.

| | | | |
|---|---|---|---|
| **ರೂಪ :-** | ಸೀದೇತ್ | ಸೀದೇತಾಂ | ಸೀದೇಯುಃ |
| | ಸೀದೇಃ | ಸೀದೇತಂ | ಸೀದೇತ |
| | ಸೀದೇಯಂ | ಸೀದೇವ | ಸೀದೇಮ ॥ 23 ॥ |

**ಪುತ್ರಂ ರಾಜ್ಯೇಽಸ್ಯ ಕೃತ್ವಾ ಹೃತಶಿರಸಮಥೋ ಚೇದಿರಾಜಂ ವಿಧಾಯ**
**ಪ್ರೋದ್ಯಂತಂ ರಾಜಸೂಯಂ ಯಮಸುತವಿಹಿತಂ ಸಂಸ್ಥಿತಂ ಯೋ ವಿಧಾಯ ।**
**ಶಕ್ರಪ್ರಸ್ಥಾತ್ಪ್ರಯಾತೋ ನಿಜನಗರಮಸೌ ಸಾಲ್ವಭಗ್ನಂ ಸಮೀಕ್ಷ್ಯ**
**ಕೃದ್ಧೋ ಘ್ನನ್ನಬ್ಧಿಗಂ ತಂ ಶಿವವರಬಲಿನಂ ಯಾನ್ ಪುರಂ ಪಾತು ನಿತ್ಯಮ್ ॥ 24 ॥**

**ಅನ್ವಯಾರ್ಥ :-** ಯಃ = ಯಾವ ಕೃಷ್ಣನು, ಅಸ್ಯ = ಜರಾಸಂಧನ, ಪುತ್ರಂ = ಸಹದೇವನೆಂಬ ಪುತ್ರನನ್ನು, ರಾಜ್ಯೇ = ಮಗಧದೇಶಾಧಿಪತ್ಯದಲ್ಲಿ (ಪಟ್ಟಾಭಿಷಿಕ್ತನನ್ನಾಗಿ), ಕೃತ್ವಾ = ಮಾಡಿ, ಅಥ = ಅನಂತರ, ಚೇದಿರಾಜಂ = ಚೇದಿ ದೇಶದ ರಾಜನಾದ ಶಿಶುಪಾಲನನ್ನು, ಹೃತಶಿರಸಂ = ಸಂಹರಿಸಲ್ಪಟ್ಟ (ಕತ್ತರಿಸಲ್ಪಟ್ಟ) ಶಿರವುಳ್ಳವನನ್ನಾಗಿ, ವಿಧಾಯ = ಮಾಡಿ, ಪ್ರೋದ್ಯಂತಂ = ಉಪಕ್ರಮವಾದ, ಯಮಸುತವಿಹಿತಂ - ಯಮಸುತ = ಧರ್ಮರಾಜನಿಂದ, ವಿಹಿತ = ಮಾಡಲ್ಪಟ್ಟ,

ರಾಜಸೂಯಂ = ರಾಜಸೂಯವೆಂಬ ಯಾಗವನ್ನು, ಸಂಸ್ಥಿತಂ = ಪೂರ್ಣವಾಗಿ (ಸಮಾಪ್ತಿಯುಳ್ಳದ್ದಾಗಿ), ವಿಧಾಯ = ಮಾಡಿಸಿ, ಶಕ್ರಪ್ರಸ್ಥಾತ್ = ಇಂದ್ರಪ್ರಸ್ಥ ಪುರದಿಂದ, ನಿಜನಗರಂ – ತನ್ನ ರಾಜಧಾನಿಯಾದ ದ್ವಾರಕಾಪಟ್ಟಣಕ್ಕೆ, ಪ್ರಯಾತಃ = ಪ್ರಾಪ್ತನಾಗಿ, ಸಾಲ್ವ ಭಗ್ನಂ – ಸಾಲ್ವ = ಸಾಲ್ವನಿಂದ, ಭಗ್ನಂ = ನಾಶಗೊಳಿಸಲ್ಪಟ್ಟ ಪ್ರಾಕಾರಾದಿಗಳುಳ್ಳ, ನಿಜನಗರಂ = ದ್ವಾರಕಾ ಪುರವನ್ನು, ಸಮೀಕ್ಷ್ಯ = ನೋಡಿ, ಕೃದ್ಧಃ = ಕುಪಿತನಾಗಿ, ಅಬ್ಧಿಗಂ = ಸಮುದ್ರ ಮಧ್ಯಭಾಗದಲ್ಲಿ ಇದ್ದ, ಶಿವವರ ಬಲಿನಂ = ಶಿವವರ = ರುದ್ರ ದೇವರ ವರದಿಂದ, ಬಲಿನಂ = ಬಲಿಷ್ಠನಾದ, ತಂ = ಆ ಸಾಲ್ವನೆಂಬ ಅಸುರನನ್ನು, ಘ್ನನ್ – ಸಂಹಾರಮಾಡಿ, ಪುರಂ = ದ್ವಾರಕಾಪುರಕ್ಕೆ, ಯಾನ್ = ಪ್ರಯಾಣ ಮಾಡಿದ (ದಯಮಾಡಿಸಿದ), ಅಸೌ = ಶ್ರೀಕೃಷ್ಣನು, ನಿತ್ಯಂ – ಸರ್ವದಾ, ಪಾತು (ಮಾಮಿತಿ ಶೇಷಃ) = ನನ್ನನ್ನು ಕಾಪಾಡಲಿ.

**ವಿಗ್ರಹವಾಕ್ಯ :-** ಹೃತಂ ಶಿರಃ ಯಸ್ಯ ಸಃ ಹೃತಶಿರಾಃ ತಂ–ಹೃತಶಿರಸಮ್ । ಚೇದಿನಾಂ ರಾಜಾ ಚೇದಿರಾಜಃ ತಂ–ಚೇದಿರಾಜಮ್ । ಯಮಸ್ಯ ಸುತಃ ಯಮಸುತಃ ಯಮಸುತೇನ ವಿಹಿತಂ–ಯಮಸುತ ವಿಹಿತಂ, ತತ್ । ಸಾಲ್ವೇನ ಭಗ್ನಂ ಸಾಲ್ವಭಗ್ನಂ, ತತ್ । ಅಬ್ಧೌ ಗಚ್ಛತಿ ಇತಿ ಅಬ್ಧಿಗಃ ತಮ್ । ಶಿವಸ್ಯ ವರಃ – ಶಿವವರಃ ತೇನ ಬಲೀ – ಶಿವವರ ಬಲೀ, ತಂ ಶಿವವರಬಲಿನಮ್ ॥

**ತಾತ್ಪರ್ಯ :-** ಜರಾಸಂಧನ ಸಂಹಾರವಾದ ಅನಂತರ ಶ್ರೀಕೃಷ್ಣನು ಪತ್ರತಾಪನೆಂಬ ರುದ್ರಸ್ವರೂಪನೂ, ತನ್ನ ಭಕ್ತನೂ ಆದ ಜರಾಸಂಧನ ಮಗನಾದ ಸಹದೇವನನ್ನು ಮಗಧರಾಜ್ಯ ಸಿಂಹಾಸನದಲ್ಲಿ ಮಂಡಿಸಿ ಪಟ್ಟಾಭಿಷೇಕ ಮಾಡಿ, ಭೀಮ ಮತ್ತು ಅರ್ಜುನರೊಡನೆ ಇಂದ್ರಪ್ರಸ್ಥಪುರಕ್ಕೆ ಆಗಮಿಸಿ ಯಮಕುಮಾರನಾದ ಧರ್ಮರಾಜನಿಂದ 'ರಾಜಸೂಯ'ವೆಂಬ ಯಾಗವನ್ನು ಪ್ರಾರಂಭ ಮಾಡಿಸಿದನು. ಯಾಗಕಾಲದಲ್ಲಿ ಸರ್ವಶ್ರೇಷ್ಠರಾದವರಿಗೆ ಅಗ್ರಪೂಜೆ ಮಾಡಿ ಗೌರವಿಸುವುದು ಸತ್ಸಂಪ್ರದಾಯವಾದ್ದರಿಂದ ಭೀಷ್ಮ ದ್ರೋಣಾದಿಗಳೂ ಹಾಗೂ ನಿಖಿಲ ಋಷಿಮುನಿಗಳ ಅಭಿಪ್ರಾಯದಂತೆ ಧರ್ಮರಾಜನು ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಲು ಸಿದ್ಧನಾದಾಗ ಚೇದಿದೇಶಾಧಿಪತಿಯೂ, ಕೃಷ್ಣನ ಸೋದರತ್ತೆಯ ಮಗನೂ ಆದ ಶಿಶುಪಾಲನು ಕೃಷ್ಣದ್ವೇಷಿಯಾದುದರಿಂದ ತನ್ನ ಸ್ವಭಾವಕ್ಕೆ ಅನುಸರಿಸಿ, ಶ್ರೀ ಕೃಷ್ಣನಿಗೆ ಅಗ್ರಪೂಜೆ ಮಾಡುವುದನ್ನು ವಿರೋಧಿಸಿ ಕೃಷ್ಣನನ್ನು ಮನಬಂದಂತೆ ನಿಂದಿಸಲು. ಹಿಂದೆ ತನ್ನ ಸೋದರತ್ತೆಗೆ ಶಿಶುಪಾಲನ ನೂರು ತಪ್ಪುಗಳನ್ನು ಕ್ಷಮಿಸುವುದಾಗಿ ವಾಗ್ದಾನ ಮಾಡಿದ್ದಂತೆ ಶ್ರೀಕೃಷ್ಣನು ಶಿಶುಪಾಲನ ಸ್ವನಿಂದಾತ್ಮಕ ನೂರು ತಪ್ಪುಗಳನ್ನು ಕ್ಷಮಿಸಿದನು. ಆದರೂ ಮತ್ತೆ ಮತ್ತೆ ಶಿಶುಪಾಲನು ನಿಂದಿಸಲು ಚಕ್ರದಿಂದ ಅವನ ಶಿರಸ್ಸನ್ನು ಕತ್ತರಿಸಿ, ಧರ್ಮರಾಯನ ಯಾಗವನ್ನು ಸಾಂಗವಾಗಿ ಪೂರ್ಣಗೊಳಿಸಿದನು.

ಶ್ರೀಕೃಷ್ಣನು ರಾಜಸೂಯಯಾಗವು ಪೂರ್ಣವಾದ ಮೇಲೆ ಪಾಂಡವರ ಪ್ರಾರ್ಥನೆಯಂತೆ ಅವರ ಪ್ರೀತ್ಯರ್ಥವಾಗಿ ಕೆಲಮಾಸಗಳು ಇಂದ್ರಪ್ರಸ್ಥದಲ್ಲಿ ವಾಸಮಾಡಿ ಅನಂತರ ಪಾಂಡವರಿಂದ ಬೀಳ್ಕೊಂಡು ಪುತ್ರಮಿತ್ರ ಕಳತ್ರಾದಿಗಳೊಡನೆ ದ್ವಾರಕಾಪುರಕ್ಕೆ ಪ್ರಯಾಣ ಬೆಳೆಸಿದನು. ಕೃಷ್ಣದ್ವೇಷಿಯಾದ ಸಾಲ್ವನು ಕೃಷ್ಣನ ಮೇಲೆ ಹಗೆ ತೀರಿಸಿಕೊಳ್ಳಲು ಅವನಿಲ್ಲದ ಸಮಯದಲ್ಲಿ ದ್ವಾರಕೆಯ ಮೇಲೆ ಧಾಳಿ ಮಾಡಿ ಕೋಟೆ ಪ್ರಾಕಾರಗಳನ್ನು ಭಗ್ನಗೊಳಿಸಿ ಪಲಾಯನಮಾಡಿದ್ದನು. ಶ್ರೀಕೃಷ್ಣನು ದ್ವಾರಕೆಗೆ ಬಂದು ಭಗ್ನವಾಗಿರುವ ಪುರವನ್ನು ಕಂಡು ಸಾಲ್ವನ ಕೃತ್ಯವಿದೆಂದು ತಿಳಿದು ಅತ್ಯಂತ ಕುಪಿತನಾಗಿ ಸಾಲ್ವನನ್ನು ದಂಡಿಸಲು ಹೊರಟನು. ಸಾಲ್ವನು ರುದ್ರದೇವರ ಅನುಗ್ರಹದಿಂದ ಸಂಪಾದಿಸಿದ "ಸೌಭಾಗ್ಯ" ಎಂಬ ವಿಮಾನದಲ್ಲಿ ಕುಳಿತು ಸಮುದ್ರದ ಮೇಲ್ಭಾಗದಲ್ಲಿರುವುದನ್ನು ಕಂಡು, ಹಿಂದೆ ಬಲಿಚಕ್ರವರ್ತಿಯಲ್ಲಿ ಆವಿಷ್ಟನಾಗಿ ಶ್ರೀಹರಿ ಮತ್ತು ಅಸುರರಿಗೆ ವಿರೋಧವೆಸಗಿದ್ದ ಬಲಿ ಎಂಬ ಅಸುರನು ಬ್ರಹ್ಮದತ್ತನಿಗೆ ಸಾಲ್ವನೆಂಬ ಹೆಸರಿನಿಂದ ಸುತನಾಗಿ ಜನಿಸಿದ್ದ ಆ ಸಾಲ್ವನನ್ನು ಚಕ್ರದಿಂದ ಸಂಹರಿಸಿ ದೇವತೆಗಳಿಂದ ಸ್ತುತ್ಯನಾಗಿ ಶ್ರೀಕೃಷ್ಣನು ದ್ವಾರಕಾಪುರಿಗೆ ಆಗಮಿಸಿ ಸರ್ವರನ್ನೂ

ಸಂತೋಷಗೊಳಿಸಿದನು ಮುಂತಾದ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುವುದು. ಇಂಥಹ ಶ್ರೀಕೃಷ್ಣಪರಮಾತ್ಮನು ನನ್ನನ್ನು ಸರ್ವದಾ ರಕ್ಷಿಸಲಿ ಎಂದು ಶ್ರೀ ಗುರುರಾಜರು ಪ್ರಾರ್ಥಿಸಿರುವರು.

**ಅಲಂಕಾರಗಳು :-** ಇಲ್ಲಿಯೂ ''ಸಾರಾಲಂಕಾರ''ವಿದೆ. ಇಲ್ಲಿ ಪಾತು ಎಂಬ ಕ್ರಿಯಾಪದವಿದೆ. ಇದನ್ನು ಹಿಂದೆಯೇ ಕೊಡಲಾಗಿದೆ. ॥ 24 ॥

**ವಿಪ್ರಾದಾಕರ್ಣ್ಯ ಧರ್ಮಂ ವನಗತಮನುಜೈಸ್ಸಾಂತ್ವಯಿತ್ವೈತ್ಯ ಸರ್ವಾ-**
**ನಭ್ಯೇತ್ಯ ದ್ವಾರಕಾಂ ಯೋ ನೃಗಮಥ ಕುಜನಿಂ ದಿವ್ಯರೂಪಂ ಚಕಾರ ।**
**ಗತ್ವಾ ವೈದೇಹಗೇಹಂ ಕತಿಪಯದಿವಸಾಂಸ್ತತ್ರ ನೀತ್ವಾತಿಭಕ್ತೌ**
**ಸಂತೋಷ್ಯ ದ್ವಾರಕಾಂ ಯಾನ್ ಬಹುಬಲಸಮಿತೋಽಯನ್ನುಪಪ್ಲಾವ್ಯಮವ್ಯಾತ್ ॥ 25 ॥**

**ಅನ್ವಯಾರ್ಥ :-** ಯಃ = ಯಾವ ಶ್ರೀಕೃಷ್ಣನು. ಅನುಜೈಃ = ಸಹೋದರರೊಡನೆ, ವನಂಗತಂ = ಅರಣ್ಯಕ್ಕೆ ಪ್ರಾಪ್ತನಾದ. ಧರ್ಮಂ = ಧರ್ಮರಾಜನನ್ನು, ವಿಪ್ರಾತ್ = ಬ್ರಾಹ್ಮಣ ದ್ವಾರಾ. ಆಕರ್ಣ್ಯ = ಕೇಳಿ, ಏತ್ಯ (ವನಮಿತಿ ಶೇಷಃ) = ವನಕ್ಕೆ ಬಂದು, ಸರ್ವಾನ್ = ಸಮಸ್ತರಾದ ಪಾಂಡವಾನ್ = ಪಾಂಡವರನ್ನು ಸಾಂತ್ವಯಿತ್ವಾ = ಅನುಕೂಲ ಸಮಾಧಾನ ವಚನಗಳಿಂದ, ದುಃಖಶಮನಮಾಡಿ. ದ್ವಾರಕಾಂ = ಅಭೇತ್ಯ = ದ್ವಾರಕೆಗೆ ಬಂದು. ಅಥ = ಅನಂತರ. ಕುಜನಿಂ = ಕ್ರಕಲಾಸ (ಓತಿಕೇತ - ಹೆಂಟೆಗೊದ್ದ) ರೂಪಧರನಾದ ನೃಗಂ = ನೃಗನಾಮಕ ರಾಜನನ್ನು, ದಿವ್ಯರೂಪಂ = ಮನೋಹರ ರೂಪವುಳ್ಳವನನ್ನಾಗಿ, ಚಕಾರ = ಮಾಡಿದನು. ವೈದೇಹಗೇಹಂ = ವಿದೇಹ ದೇಶಾಧಿಪತಿಯಾದ ಬಹುಲಾಶ್ವರಾಜನ ಮನೆಗೆ, ಗತ್ವಾ = ಹೋಗಿ, ತತ್ರ = ವಿದೇಹ ದೇಶಾಧಿಪತಿಯ ಮನೆಯಲ್ಲಿ, ಕತಿಪಯ ದಿವಸಾನ್ = ಕೆಲದಿನಗಳನ್ನು, ನೀತ್ವಾ = ಕಳೆದು, ಅತಿಭಕ್ತೌ = ಅತ್ಯಂತ ಭಕ್ತರಾದ, ವಿದೇಹ ದೇಶಾಧಿಪತಿ ಮತ್ತು ಶ್ರುತ ದೇವನೆಂಬ ಯಾದವಶ್ರೇಷ್ಠನನ್ನು, ಸಂತೋಷ್ಯ = ಆನಂದಪಡಿಸಿ, ದ್ವಾರಕಾಂ = ದ್ವಾರಕಾಪಟ್ಟಣಕ್ಕೆ, ಯಾನ್ = ಹೋಗಿ, ಬಹುಬಲಸಮಿತಃ = ಬಹು ಸೇನೆಯಿಂದ ಯುಕ್ತನಾಗಿ, ಉಪಪ್ಲಾವ್ಯಂ = ಉಪಪ್ಲಾವ್ಯವೆಂಬ ಪಟ್ಟಣಕ್ಕೆ, ಅಯನ್ = ಬಂದ, ಸಃ = ಶ್ರೀ ಕೃಷ್ಣನು, ಅವ್ಯಾತ್ (ಮಾಮಿತಿಶೇಷಃ) = ನನ್ನನ್ನು ರಕ್ಷಣೆಮಾಡಲಿ.

**ವಿಗ್ರಹವಾಕ್ಯ :-** ವನಂ ಗತಃ ವನಗತಃ, ತಮ್ ॥ , ನರಂ ಗಚ್ಛತಿ ಇತಿ ನೃಗಃ, ತಮ್ ॥ ಕುತ್ಸಿತಾ ಜನಿಃ ಯಸ್ಯಸಃ ಕುಜನಿಃ ತಮ್ ॥ ದಿವಿ ಭವಂ ದಿವ್ಯಂ ದಿವ್ಯಂ ಚ ತತ್ ರೂಪಂ ಚ ದಿವ್ಯರೂಪಂ ತತ್ ॥ ವಿದೇಹಸ್ಯ ಅಯಂ ವೈದೇಹಃ ತಸ್ಯ ಗೇಹಂ ವೈದೇಹಗೇಹಂ ತತ್ ॥ ಕತಿಪಯೇ ಚ ತೇ ದಿವಸಾಶ್ಚ ಕತಿಪಯದಿವಸಾಃ ತಾನ್ ॥ ಯಾತಿ ಇತಿ ಯಾನ್ ॥ ಬಹು ಚ ತತ್ ಬಲಂ ಚ ಬಹುಬಲಂ ತೇನ ಸಮಿತಃ ಬಹುಬಲಸಮಿತಃ ॥ ಯಾತಿ ಇತಿ ಯಾನ್ ॥

**ತಾತ್ಪರ್ಯ:-** ಒಂದು ದಿನ ಶ್ರೀಕೃಷ್ಣನು ''ಸುಧರ್ಮ'' ಎಂಬ ತನ್ನ ಸಭೆಯಲ್ಲಿ ಸ್ವಕೀಯರಿಂದ ಸೇವಿತನಾಗಿ ಕುಳಿತಿರುವಾಗ ಅಧರ್ಮಿಯಾದ ದುರ್ಯೋಧನನಿಂದ ಕಪಟ ದ್ಯೂತದಲ್ಲಿ ಪರಾಜಿತನಾದ ಧರ್ಮರಾಜನು ಸರ್ವಸ್ವವನ್ನೂ ಕಳೆದುಕೊಂಡು ಪಣಬಂಧದಂತೆ 12 ವರ್ಷ ವನವಾಸ, 1 ವರ್ಷ ಅಜ್ಞಾತವಾಸಕ್ಕಾಗಿ ಅನುಜರೊಡನೆ ಅರಣ್ಯಕ್ಕೆ ಬಂದಿರುವನೆಂಬ ಸಮಾಚಾರವನ್ನು ಓರ್ವ ಬ್ರಾಹ್ಮಣನಿಂದ ತಿಳಿದು ಬಹಳ ಕೋಪತಾಪಗಳಿಂದ ಉದ್ವಿಗ್ನ ಮನಸುಳ್ಳವ-ನಾಗಿ ಸತ್ಯಭಾಮಾ ದೇವಿಯೊಡನೆ ವನದಲ್ಲಿರುವ ಪಾಂಡವರ ಬಳಿಗೆ ಹೋಗಿ ಪಾಂಡವರನ್ನು ಬಹು ವಿಧವಾಗಿ ಅನುಕೂಲವಚನಗಳಿಂದ ಸಮಾಧಾನಪಡಿಸಿ ಅವರಿಂದ ಬೀಳ್ಕೊಂಡು ಮತ್ತೆ ದ್ವಾರಕಾನಗರಿಗೆ ದಯಮಾಡಿಸಿದನು.

ಒಂದು ದಿನ ಒಬ್ಬ ಬ್ರಾಹ್ಮಣನ ಗೋವು ತಿಳಿಯದೆ ವಿಧಿವಶದಿಂದ ತನ್ನ ಗೋಶಾಲೆಗೆ ಬರಲು ಅದು ಬ್ರಾಹ್ಮಣನ ಗೋವೆಂದು ತಿಳಿಯದೆ ಮತ್ತೊಬ್ಬರಿಗೆ ದಾನಮಾಡಿದ್ದರಿಂದ ಬ್ರಹ್ಮಸ್ವಾಪರಾಧದ ಕಾರಣದಿಂದ ಕೃಕಲಾಸ (ಸರಟ) ಸ್ವರೂಪವನ್ನು ಪಡೆದು ನೃಗನೆಂಬ ರಾಜನು ದ್ವಾರಕೆಯ ಉಪವನದಲ್ಲಿದ್ದ ಪಾಳು ಭಾವಿಯೊಂದರಲ್ಲಿ ಬಿದ್ದು ದುಃಖಿಸುತ್ತಿದ್ದನು. ಆ ವನದಲ್ಲಿ ಆಟವಾಡುತ್ತಿದ್ದ ಯಾದವರು ನೃಗರಾಜನ ದುರವಸ್ಥೆಯನ್ನು ಕಂಡು ಅವನನ್ನು ಪಾಳು ಭಾವಿಯಿಂದ ಮೇಲೆತ್ತಲು ಪ್ರಯತ್ನಿಸಿ ವಿಫಲರಾಗಿ ಆ ಸಮಾಚಾರವನ್ನು ಅವರು ಶ್ರೀಕೃಷ್ಣನಲ್ಲಿ ವಿಜ್ಞಾಪಿಸಿದರು. ಶ್ರೀಕೃಷ್ಣನು ಕೂಡಲೇ ಅಲ್ಲಿಗೆ ಹೋಗಿ ಲೀಲೆಯಿಂದ ಅವನನ್ನು ಎಡಗೈಯಿಂದ ಮೇಲೆತ್ತಿ ಕೃಕಲಾಸದೇಹದಿಂದ ಮೋಚನಗೊಳಿಸಿ ಅವನಿಗೆ ದಿವ್ಯರೂಪವನ್ನಿತ್ತು ಅನುಗ್ರಹಿಸಿದನು. ನೃಗರಾಜನು ಶ್ರೀಕೃಷ್ಣನನ್ನು ಬಹುವಿಧವಾಗಿ ಸ್ತೋತ್ರ ಮಾಡಿದನು. ಶ್ರೀಕೃಷ್ಣನು ಆ ರಾಜನಿಗೆ ಊರಿಗೆ ಹೋಗಿಬರಲು ಅಪ್ಪಣೆಮಾಡಿ ಯಾದವರನ್ನೆಲ್ಲಾ ಕರೆದು ಬ್ರಹ್ಮಸ್ವಾಪಹಾರವನ್ನು ಮಾಡಬಾರದೆಂದು ಧರ್ಮಶಿಕ್ಷಾವನ್ನು ಅನುಗ್ರಹಿಸಿದನು.

ಕೆಲಕಾಲ ಕಳೆದ ಮೇಲೆ ಶ್ರೀಕೃಷ್ಣನು ವಿದೇಹ ಪುರವಾಸಿಯಾದ, ತನ್ನ ಭಕ್ತನೂ, ಯಾದವ ಶ್ರೇಷ್ಠನೂ ಆದ ಶ್ರುತದೇವನೆಂಬುವನನ್ನು ಮತ್ತು ವಿದೇಹದೇಶಾಧಿಪತಿಯೂ, ಸ್ವಭಕ್ತನೂ ಆದ ಬಹುಲಾಶ್ವನೆಂಬ ರಾಜನನ್ನೂ ನೋಡಲು ವಿದೇಹ ನಗರಕ್ಕೆ ಬಂದನು. ಶ್ರೀಕೃಷ್ಣಾಗಮನವನ್ನು ತಿಳಿದು ಆನಂದಿಸಿ ಶ್ರುತದೇವ ಮತ್ತು ಬಹುಲಾಶ್ವರು ತಮ್ಮ ತಮ್ಮ ಮನೆಗಳಿಗೆ ಬಂದು ಆತಿಥ್ಯ ಸ್ವೀಕಾರ ಮಾಡಬೇಕೆಂದು ಪ್ರಾರ್ಥಿಸಹತ್ತಿದ್ದರಿಂದ ಏಕಕಾಲದಲ್ಲಿ ರೂಪದ್ವಯದಿಂದ ಆ ಉಭಯರ ಮನೆಗಳಿಗೂ ಹೋಗಿ ಅಲ್ಲಿ ಅವರಿಂದ ಪೂಜೆಯನ್ನು ಸ್ವೀಕಾರಮಾಡಿ ಅವರಿಬ್ಬರ ಪ್ರಾರ್ಥನೆಯಂತೆ ಕೆಲ ಮಾಸಗಳನ್ನಲ್ಲಿ ಕಳೆದು ಸ್ವಭಕ್ತರಾದ ಶ್ರುತದೇವ ಬಹುಲಾಶ್ವರನ್ನು ಪರಮಾನಂದಗೊಳಿಸಿ ಅವರಿಂದ ಬೀಳ್ಕೊಂಡು ದ್ವಾರಕೆಗೆ ದಯಮಾಡಿಸಿದನು.

ಕೆಲ ವರ್ಷಗಳು ಕಳೆದಮೇಲೆ ಪಾಂಡವರು ವನವಾಸ, ಅಜ್ಞಾತವಾಸಗಳನ್ನು ಮುಗಿಸಿ ಉತ್ತರಗೋಗ್ರಹಣ ಕಾಲದಲ್ಲಿ ದುರ್ಯೋಧನಾದಿ ಕೌರವರನ್ನು ಪರಾಜಯಗೊಳಿಸಿ, ಮಹಾಸೇನೆಯಿಂದೊಡಗೂಡಿ ಉಪಪ್ಲಾವ್ಯ ನಗರಕ್ಕೆ ಬಂದಿರುವ ಸಮಾಚಾರವನ್ನು ಕೇಳಿ ಪರಮಾನಂದಭರಿತನಾಗಿ ಶ್ರೀಕೃಷ್ಣನು ಯಾದವರೊಡನೆ ಅಕ್ಷೋಹಿಣಿ ಸಹಿತನಾಗಿ ಉಪಪ್ಲಾವ್ಯ-ನಗರಕ್ಕೆ ಬಂದು ಪಾಂಡವರಿಂದ ಪೂಜಿತನಾಗಿ ಸರ್ವರನ್ನೂ ಸಂತೋಷಪಡಿಸಿದನು ಮುಂತಾದ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುವುದು. ಅಂಥ ಮಹಾಮಹಿಮನಾದ ಶ್ರೀಕೃಷ್ಣನು ನನ್ನನ್ನು ರಕ್ಷಿಸಲಿ ಎಂದು ಶ್ರೀಗುರು-ಸಾರ್ವಭೌಮರು ಪ್ರಾರ್ಥಿಸಿದ್ದಾರೆ.

**ಅಲಂಕಾರಗಳು :-** ಇಲ್ಲಿಯೂ ಶ್ರೀಕೃಷ್ಣನ ಚರಿತ್ರೆಯನ್ನು ಉತ್ತರೋತ್ತರ ಉತ್ಕರ್ಷದಿಂದ ಅದ್ಭುತವಾಗಿ ವರ್ಣಿಸಿರುವುದರಿಂದ ''ಸಾರಾಲಂಕಾರ''ವೂ ಒಂದೇ ವಸ್ತುವಾದ ಶ್ರೀಕೃಷ್ಣನನ್ನು ಅನೇಕ ಘಟನೆಗಳಲ್ಲಿ ವರ್ಣಿಸಿರುವುದರಿಂದ ''ವಿಶೇಷಾಲಂಕಾರ''ವೂ ಇದೆ. ಅವುಗಳ ಲಕ್ಷಣೋದಾರಣೆಗಳನ್ನು ಹಿಂದೆಯೇ ಕೊಟ್ಟಿದೆ.

ಇಲ್ಲಿ ''ಚಕಾರ'' ''ಅವ್ಯಾತ್'' ಎಂಬ ಎರಡು ಕ್ರಿಯಾಪದಗಳಿವೆ. ''ಡುಕೃಞ್ ಕರಣೇ'' ಎಂಬ ಧಾತುವಿನ ಸಕರ್ಮಕ ಕರ್ತರೀ ಲಿಟ್ ಪರಸ್ಮೈಪದಿ ಪ್ರಥಮ ಪುರುಷ ಏಕವಚನದಲ್ಲಿ ''ಚಕಾರ'' ಎಂದಾಗಿದೆ.

**ರೂಪ :-** ಚಕಾರ – ಚಕ್ರತುಃ – ಚಕ್ರುಃ

ಚಕರ್ಥ – ಚಕ್ರಥುಃ – ಚಕ್ರ

ಚಕರ – ಚಕೃವ – ಚಕೃಮ ॥

ಎರಡನೆಯದರ ರೂಪಾದಿಗಳನ್ನು ಹಿಂದೆಯೇ ಕೊಡಲಾಗಿದೆ ॥ 25 ॥

**ದೌತ್ಯಂ ಕುರ್ವನ್ನನಂತಾಃ ನಿಜರುಚಿರತನೂರ್ದರ್ಶಯನ್ ದಿವ್ಯದೃಷ್ಟೇಃ**
**ಗೀತಾತತ್ತ್ವೋಪದೇಶಾದ್ರಣಮುಖವಿಜಯಸ್ಯಾಚರನ್ ಸಾರಥಿತ್ವಮ್ ।**
**ನೀತ್ವಾ ಕೈಲಾಸಮೇನಂ ಪಶುಪತಿಮುಖತೋ ದಾಪಯಿತ್ವಾಸ್ತ್ರಮಸ್ಮೈ**
**ಭೀಮೇನಾಪಾತ್ಯ ದುಷ್ಟಂ ಕ್ಷಿತಿಪತಿಮಕರೋದ್ಧರ್ಮರಾಜಂ ತಮೀಡೇ ॥ 26 ॥**

**ಅನ್ವಯಾರ್ಥ :-** ಯಃ = ಶ್ರೀಕೃಷ್ಣನು, ದೌತ್ಯಂ = ಕುರುಪಾಂಡವರ ಮಧ್ಯದಲ್ಲಿ ಸಂಧಿಗಾಗಿ ದೂತಕಾರ್ಯವನ್ನು, ಕುರ್ವನ್ = ಮಾಡುವವನಾಗಿ, ದಿವ್ಯ ದೃಷ್ಟೇಃ = ತನ್ನ ಅನುಗ್ರಹದಿಂದ ದಿವ್ಯದೃಷ್ಟಿಯನ್ನು ಪಡೆದ ಧೃತರಾಷ್ಟ್ರನಿಗೆ, ಅನಂತಾಃ = ಅವಧಿರಹಿತವಾದ (ಅಂತ್ಯವಿಲ್ಲದ), ನಿಜರುಚಿರತನೂಃ – ನಿಜ = ತನ್ನ, ರುಚಿರ = ಮನೋಹರಗಳಾದ, ತನೂಃ = ಸ್ವರೂಪಗಳನ್ನು, ದರ್ಶಯನ್ = ತೋರಿಸಿದವನಾಗಿ, ಗೀತಾತತ್ತ್ವೋಪ ದೇಶಾತ್ = ಗೀತೋಕ್ತತತ್ತ್ವೋಪದೇಶಗಳಿಂದ, ದಿವ್ಯದೃಷ್ಟೇಃ = ತನ್ನ, ಅನುಗ್ರಹದಿಂದ ದಿವ್ಯ ಚಕ್ಷುಸ್ಸನ್ನು ಪಡೆದ ಪ್ರಿಯಸಖನಾದ – ರಣಮುಖವಿಜಯಸ್ಯ – ರಣಮುಖ = ಯುದ್ಧೋನ್ಮುಖನಾದ, ವಿಜಯಸ್ಯ = ಅರ್ಜುನನಿಗೆ, ನಿಜರುಚಿರತನೂಃ – ತನ್ನ ಮನೋಹರವಾದ ಅನಂತರೂಪಯುಕ್ತವಾದ, ವಿಶ್ವರೂಪವನ್ನು, ದರ್ಶಯನ್ – ತೋರಿಸುವವನಾಗಿ, ಸಾರಥಿತ್ವಂ = ಅರ್ಜುನನ ರಥದ ಸಾರಥ್ಯವನ್ನು, ಆಚರನ್ = ಮಾಡಿದವನಾಗಿ, ಏನಂ = ಅರ್ಜುನನನ್ನು, ಕೈಲಾಸಂ = ಕೈಲಾಸಪರ್ವತಕ್ಕೆ, ನೀತ್ವಾ = ಕರೆದೊಯ್ದು, ಪಶುಪತಿಮುಖತಃ = ಪಶುಪತಿ = ರುದ್ರದೇವರ, ಮುಖತಃ = ಮುಖದಿಂದ , ಅಸ್ತ್ರಂ = ಉಪದೇಶ ಮೂಲಕ ದಿವ್ಯಾಸ್ತ್ರವನ್ನು, ಅಸ್ಮೈ = ಅರ್ಜುನನಿಗೆ, ದಾಪಯಿತ್ವಾ – ಕೊಡಿಸಿ, ಭೀಮಸೇನ = ಭೀಮಸೇನನಿಂದ, ದುಷ್ಟಂ = ದೋಷಯುಕ್ತನಾದ ದುರ್ಯೋಧನನ್ನು, ಆಪಾತ್ಯ = ಕೊಲ್ಲಿಸಿ, ಧರ್ಮರಾಜಂ = ಯುಧಿಷ್ಠಿರನನ್ನು, ಕ್ಷಿತಿಪತಿಂ = ಪೃಥ್ವೀಪತಿಯನ್ನಾಗಿ, ಅಕರೋತ್ = ಮಾಡಿದನು. ತಂ = ಅಂಥ ಶ್ರೀಕೃಷ್ಣನನ್ನು, ಈಡೇ = ಸ್ತುತಿಸುತ್ತೇನೆ.

**ವಿಗ್ರಹವಾಕ್ಯ :-** ದೂತಸ್ಯ ಭಾವಃ ದೌತ್ಯಂ ತತ್ । ನ ವಿದ್ಯತೇ ಅಂತಃ ಯಾಸಾಂ ತಾಃ ಅನಂತಾಃ ತಾಃ । ರುಚಿರಾಶ್ಚ ತಾಃ ತನ್ವಶ್ಚ ರುಚಿರತನ್ವಃ, ನಿಜಾಶ್ಚ ತಾಃ ರುಚಿರತನ್ವಶ್ಚ ತಾಃ ರುಚಿರತನೂಃ । ದಿವ್ಯಾ ದೃಷ್ಟಿಃ ಯಸ್ಯ ಸಃ ದಿವ್ಯದೃಷ್ಟಿಃ ತಸ್ಯ ದಿವ್ಯದೃಷ್ಟೇಃ । ಗೀತಾಯಾಃ ತತ್ತ್ವಾನಿ ಗೀತಾತತ್ತ್ವಾನಿ, ತೇಷಾಂ ಉಪದೇಶಃ ಗೀತಾತತ್ತ್ವೋಪದೇಶಃ ತಸ್ಮಾತ್ ಗೀತಾತತ್ತ್ವೋಪದೇಶಾತ್ । ರಣೇ ಮುಖಂ ಯಸ್ಯ ಸಃ ರಣಮುಖಃ, ಸ ಚಾಸೌ ವಿಜಯಶ್ಚ ರಣಮುಖವಿಜಯಃ, ತಸ್ಯ ರಣಮುಖವಿಜಯಸ್ಯ । ಸಾರಥೇಃ ಭಾವಃ ಸಾರಥ್ಯಂ ತತ್ ಸಾರಥಿತ್ವಮ್ । ಪಶುಪತೇಃ ಮುಖಂ ಪಶುಪತಿಮುಖಂ, ತಸ್ಮಾತ್ ಪಶುಪತಿಮುಖತಃ । ಕ್ಷಿತೇಃ ಪತಿಃ ಕ್ಷಿತಿಪತಿಃ, ತಂ ಕ್ಷಿತಿಪತಿಮ್ ॥

**ತಾತ್ಪರ್ಯ:-** ಭಗವಾನ್ ಶ್ರೀಕೃಷ್ಣನು ಉಪಪ್ಲಾವ್ಯ ನಗರಕ್ಕೆ ಆಗಮಿಸಿದ ಮೇಲೆ ಧರ್ಮರಾಜ, ಭೀಮ, ಅರ್ಜುನ, ನಕುಲ ಸಹದೇವಾದಿ ಪಾಂಡವರು, ಪಾಂಚಾಲರಾಜಾದಿ ಪಾಂಡವಹಿತೈಷಿಗಳೊಡನೆ ವಿಚಾರವಿನಿಮಯಮಾಡಿ ಪಾಂಡವರಿಗೆ ಅರ್ಧರಾಜ್ಯವನ್ನು ಕೊಡಿಸಲು ಯುದ್ಧವನ್ನು ಮಾಡಬೇಕೆಂದು ಪ್ರಸ್ತಾಪ ಬಂದಾಗ, ಮೊದಲು ಭೀಷ್ಮ ದ್ರೋಣಾದಿಗಳು, ಧೃತರಾಷ್ಟ್ರ, ದುರ್ಯೋಧನಾದಿಗಳೊಡನೆ ಸಂಧಿಪ್ರಸ್ತಾಪ ಮಾಡಿ ಅದು ಸಫಲವಾಗದಿದ್ದಲ್ಲಿ ನಂತರ ಯುದ್ಧವನ್ನು ಘೋಷಿಸಬೇಕೆಂದು ತೀರ್ಮಾನಿಸಿದನು. ಅನಂತರ ಸಂಧಿಕಾರ್ಯಕ್ಕೆ ದೂತನಾಗಿ ತಾನೇ ಹೋಗಬೇಕೆಂದು ಎಲ್ಲರೂ ಪ್ರಾರ್ಥಿಸಿದ್ದರಿಂದ ಅವರುಗಳ ಕೋರಿಕೆಯನ್ನು ಮನ್ನಿಸಿ ಹಸ್ತಿನಾವತಿಗೆ ದೂತನಾಗಿ ಹೋದನು ಮತ್ತು ರಾಜಸಭೆಯಲ್ಲಿ ಧೃತರಾಷ್ಟ್ರಾದಿಗಳನ್ನು ಕಂಡು ಪಾಂಡವರಿಗೆ ಅರ್ಧರಾಜ್ಯವನ್ನು ಕೊಡಬೇಕೆಂದು ಅನುಕೂಲವಚನಗಳಿಂದ ತಿಳಿಸಿದನು. ದುರಾಗ್ರಹಿಯಾದ ದುರ್ಯೋಧನನು ಸಂದಿಗೆ ಒಪ್ಪದೆ ದೂತನಾಗಿ ಬಂದ ಕೃಷ್ಣನನ್ನೇ ಬಂಧಿಸಲು

ಪ್ರಯತ್ನಿಸಲು ತನ್ನ ಅಸಾಧಾರಣ ಮಹಿಮೆಯನ್ನು ಪ್ರಕಾಶಗೊಳಿಸಿ ದುರ್ಯೋಧನಾದಿಗಳಿಗೆ ಭಯವನ್ನುಂಟು ಮಾಡಲು ತನ್ನ ಅಪರಿಚ್ಛಿತ ಅನಂತ ದಿವ್ಯರೂಪಗಳನ್ನು ಪ್ರದರ್ಶಿಸಿ, ದುರ್ಯೋಧನಾದಿಗಳ ಕಣ್ಣು ಮುಚ್ಚುವಂತೆ ಮಾಡಿ ಅವರಿಗೆ ಬಹುಭಯವನ್ನು ಹುಟ್ಟಿಸಿ, ಧೃತರಾಷ್ಟ್ರನಿಗೆ ದಿವ್ಯದೃಷ್ಟಿಯನ್ನಿತ್ತು ಅವನಿಗೆ ತನ್ನ ವಿಶ್ವರೂಪವನ್ನು ಪ್ರದರ್ಶಿಸಿ, ಅವನಿಂದ ಸ್ತುತ್ಯನಾಗಿ ಅವನ ಪ್ರಾರ್ಥನೆಯಂತೆ ಮತ್ತೆ ಅವನನ್ನು ಕುರುಡನನ್ನಾಗಿ ಮಾಡಿ ಯುದ್ಧದಿಂದಲೇ ಪಾಂಡವರು ತಮ್ಮ ಹಕ್ಕಿನ ರಾಜ್ಯವನ್ನು ಪಡೆಯುವರೆಂದು ಹೇಳಿ ಅಲ್ಲಿಂದ ಪಾಂಡವರ ಬಳಿಗೆ ಬಂದು ಸಮಸ್ತ ವಿಚಾರಗಳನ್ನೂ ನಿರೂಪಿಸಿ, ಅವರನ್ನು ಯುದ್ಧಕ್ಕೆ ಸನ್ನದ್ಧರನ್ನಾಗಿ ಮಾಡಿ ಸಮಸ್ತ ಸನ್ನಾಹಗಳನ್ನೂ ಅವರಿಂದ ಮಾಡಿಸಿ, ಏಳು ಅಕ್ಷೋಹಿಣೀ ಸೇನೆಯಿಂದ ಕೂಡಿದ ಪಾಂಡವರು ಹನ್ನೊಂದು ಅಕ್ಷೋಹಿಣೀ ಸೈನ್ಯದಿಂದ ಕೂಡಿದ ಕೌರವರು ಕುರುಕ್ಷೇತ್ರದಲ್ಲಿ ಯುದ್ಧಕ್ಕೆ ಮಿಲಿತರಾಗಿರುವಾಗ ಯುದ್ಧಸನ್ನದ್ಧನಾಗಿ ಶ್ರೀಹನುಮದ್ಧ್ವಜದಿಂದ ಶೋಭಿಸುವ ದಿವ್ಯರಥದಲ್ಲಿ ಮಂಡಿಸಿರುವ ಅರ್ಜುನನ ಪ್ರಾರ್ಥನೆಯಂತೆ ರಥಸಾರಥ್ಯವನ್ನು ವಹಿಸಿ ಉಭಯ ಸೇನೆಗಳ ಮಧ್ಯದಲ್ಲಿ ರಥವನ್ನು ಸ್ಥಾಪಿಸಿದನು.

ಅರ್ಜುನನು ಯುದ್ಧಕ್ಕಾಗಿ ಬಂದು ಸೇರಿರುವ ಗುರುಗಳು, ಮಿತ್ರರು, ಅಣ್ಣ ತಮ್ಮಂದಿರೇ ಮೊದಲಾದ ಬಾಂಧವರನ್ನು ಕಂಡು ಅವರನ್ನು ಸಂಹರಿಸಿ ಪಾಪಭಾಗಿಯಾಗಬೇಕಲ್ಲಾ ಎಂದು ದುಃಖಿತನಾಗಿ ''ಕೃಷ್ಣ ! ಬಂಧುಹನನರೂಪವಾದ ಈ ಯುದ್ಧವನ್ನು ನಾನು ಮಾಡಲಾರೆ. ನನಗೆ ರಾಜ್ಯ ಬೇಡ, ಯುದ್ಧದಿಂದ ಹಿಂದಿರುಗಲು ನನಗೆ ಅನುಮತಿ ನೀಡು!'' ಎಂದು ಪ್ರಾರ್ಥಿಸಲು ಅವನಿಗೆ ದಿವ್ಯದೃಷ್ಟಿಯನ್ನು ಅನುಗ್ರಹಿಸಿ, ಅವನ ಯೋಗ್ಯತಾನುಸಾರವಾಗಿ ತನ್ನ ವಿರಾಟ್ ವಿಶ್ವರೂಪವನ್ನು ದರ್ಶನ ಮಾಡಿಸಿ, ಭಗವದ್ಗೀತೋಕ್ತ ರೀತಿಯಿಂದ ತನ್ನ ಸರ್ವಸ್ವಾತಂತ್ರ್ಯಾದಿ ರೂಪ ಸತ್ತತ್ವಗಳನ್ನು ಉಪದೇಶಿಸಿ ''ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾಜ್ಜನಾರ್ದನ..... ಕರಿಷ್ಯೇ ವಚನಂ ತವ'' ಇತ್ಯಾದಿ ರೀತಿಯಿಂದ ಮೋಹರಹಿತನಾಗಿ ತನ್ನಾಜ್ಞೆಯಂತೆ ಕ್ಷತ್ರಿಯರಿಗೆ ಧರ್ಮವಾದ ಯುದ್ಧರೂಪ ಕರ್ಮವನ್ನು ಭಗವತ್ಸೇವಾರೂಪವಾಗಿ ಮಾಡಲು ಸಿದ್ಧನಾಗಿ ಶಸ್ತ್ರವನ್ನು ಧರಿಸಿನಿಂತ ಅರ್ಜುನನಿಂದ ಯುದ್ಧವನ್ನು ಮಾಡಿಸಿದನು.

ಯುದ್ಧವು ಘೋರವಾಗಿ ನಡೆಯುತ್ತಿರಲೊಂದುದಿನ ದ್ರೋಣರ ಚಕ್ರವ್ಯೂಹದಲ್ಲಿ ಕೌರವರು ಹಾಗೂ ಜಯದ್ರಥನ ವಂಚನೆಯಿಂದ ಜಯದ್ರಥನಿಂದ ಕುಮಾರ ಅಭಿಮನ್ಯುವು ಸಂಹೃತನಾದ ವಿಚಾರವನ್ನು ತಿಳಿದು ಅತ್ಯಂತ ಕುಪಿತನಾಗಿ ''ಜಯದ್ರಥನನ್ನು ನಾಳೆ ಸೂರ್ಯಾಸ್ತಮಾನವಾಗುವುದರೊಳಗೆ ಸಂಹರಿಸುತ್ತೇನೆ'' ಎಂದು ಪ್ರತಿಜ್ಞೆ ಮಾಡಿದ ಅರ್ಜುನನನ್ನು ಅಂದು ರಾತ್ರಿ ಸ್ವಪ್ನದಲ್ಲಿ ಕೈಲಾಸಪರ್ವತಕ್ಕೆ ರುದ್ರದೇವರ ಬಳಿಗೆ ಕರೆದುಕೊಂಡು ಹೋಗಿ ಶ್ರೀಕೃಷ್ಣನು ತಾನೇ ಜಗತ್ಸೃಷ್ಟ್ಯಾದ್ಯಮಿತ ಶಕ್ತಿಸಂಪನ್ನನಾಗಿದ್ದರೂ ''ಅಪ್ಯಚ್ಯುತೋ ಗುರುದ್ವಾರಾ ಪ್ರಸಾದಕೃದಹಂತ್ವಿತಿ'' ಎಂಬ ಪ್ರಮಾಣವನ್ನು ಜ್ಞಾಪಕಪಡಿಸಲು ಅರ್ಜುನನಿಗೆ ಸಾಕ್ಷಾತ್ ಗುರುವಾದ ರುದ್ರದೇವರಿಂದ ಅರ್ಜುನನು ಅಪೇಕ್ಷಿಸಿದ ಉಲ್ಬಣವಾದ ಅಸ್ತ್ರವನ್ನು ಉಪದೇಶದ್ವಾರಾ ಕೊಡಿಸಿಕೊಟ್ಟು ಮರಳಿ ಅರ್ಜುನನೊಡನೆ ಯುದ್ಧಭೂಮಿಗಾಗಮಿಸಿ, ಜಯದ್ರಥನನ್ನು ಯುದ್ಧದಲ್ಲಿ ಸಂಹಾರ ಮಾಡಿಸಿ, ಸಕಲ ಕೌರವರನ್ನೂ ಸಂಹಾರ ಮಾಡಿಸಿ, ಭೀಮಸೇನನಿಂದ ಗದಾಯುದ್ಧದಲ್ಲಿ ಶಿವವರಬಲದಿಂದ ದರ್ಪಿತನಾದ, ಕಲಿಸ್ವರೂಪನಾದ ದುರ್ಯೋಧನನನ್ನು ಸಂಹಾರ ಮಾಡಿಸಿ, ಬ್ರಹ್ಮಾದಿದೇವತೆಗಳಿಂದ ಸ್ತುತ್ಯನಾಗಿ ಶತ್ರುರಹಿತವಾದ ಯುದ್ಧ ಪ್ರದೇಶವನ್ನು ಬಿಟ್ಟು ಪಾಂಡವರೊಡನೆ ಹಸ್ತಿನಾವತಿಗೆ ಬಂದು, ಪುತ್ರಶೋಕ ಸಂತಪ್ತರಾದ ಧೃತರಾಷ್ಟ್ರ - ಗಾಂಧಾರಿಯರನ್ನು ಸಾಂತ್ವನಗೊಳಿಸಿ, ಹಸ್ತಿನಾಪುರ ಸಾಮ್ರಾಜ್ಯಸಿಂಹಾಸನದಲ್ಲಿ ಧರ್ಮರಾಜನನ್ನು ಮಂಡಿಸಿ ಪಟ್ಟಾಭಿಷೇಕ ಮಾಡಿಸಿ, ಭೀಮಸೇನನನ್ನು ಯೌವರಾಜ್ಯದಲ್ಲೂ, ಅರ್ಜುನ, ನಕುಲ - ಸಹದೇವರನ್ನು ಅವರವರ ಕಾರ್ಯದಲ್ಲಿ ನಿಯೋಜನಮಾಡಿ ಅವರಿಂದ ಜಗತ್ತನ್ನು ಪಾಲನಮಾಡಿಸಿ, ಸರ್ವರನ್ನೂ ಸಂತೋಷಗೊಳಿಸಿದನು ಇತ್ಯಾದಿ ಕಥೆಯು ಈ ಪದ್ಯದಿಂದ ಸೂಚಿತವಾಗುವುದು.

**ಅಲಂಕಾರಗಳು :-** ಇಲ್ಲಿಯೂ "ಸಾರ", "ವಿಶೇಷ" ಮತ್ತು "ಅಸಂಭವ"ಗಳೆಂಬ ಅಲಂಕಾರಗಳಿವೆ. ಇವುಗಳ ಲಕ್ಷಣೋದಾಹರಣಗಳನ್ನು ಹಿಂದೆಯೇ ಕೊಡಲಾಗಿದೆ.

ಇಲ್ಲಿ "ಅಕರೋತ್, ಈಡೇ" ಎಂಬ ಎರಡು ಕ್ರಿಯಾಪದಗಳಿವೆ. "ಡುಕೃಞ್‌ಕರಣೇ" ಎಂಬ ಧಾತುವಿನ ಸಕರ್ಮಕ ಕರ್ತರಿ ಲಙ್ ಪರಸ್ಮೈಪದಿ ಪ್ರಥಮಪುರುಷ ಏಕವಚನದಲ್ಲಿ ಅಕರೋತ್ ಎಂದಾಗಿದೆ.

| | | | |
|---|---|---|---|
| **ರೂಪ :-** | ಅಕರೋತ್ | ಅಕುರುತಾಂ | ಅಕುರ್ವನ್ |
| | ಅಕರೋಃ | ಅಕುರುತಂ | ಅಕುರುತ |
| | ಅಕರವಂ | ಅಕುರ್ವ | ಅಕುರ್ಮ ॥ |

"ಈಡ-ಸ್ತುತೌ" ಎಂಬ ಧಾತುವಿನ ಸಕರ್ಮಕಕರ್ತರಿ ಲಟ್ ಆತ್ಮನೇಪದಿ ಉತ್ತಮ ಪುರುಷ ಏಕವಚನದಲ್ಲಿ "ಈಡೇ" ಎಂದಾಗಿದೆ.

| | | | | |
|---|---|---|---|---|
| **ರೂಪ :-** | ಈಟ್ಟೇ | ಈಡಾತೇ | ಈಡತೇ | |
| | ಈಡಿಷೆ | ಈಡಾಥೇ | ಈಡಿಧ್ವೆ | |
| | ಈಡೇ | ಈಡಿವಹೇ | ಈಡಿಮಹೆ | ॥ 26 ॥ |

**ಪ್ರಾಪ್ತಃ ಸ್ಥಾನಂ ಯದೂನಾಂ ಪ್ರಿಯಸಖಮಕೃತಾವಾಪ್ತಕಾಮಂ ಕುಚೇಲಂ**
**ಕುರ್ವನ್ ಕರ್ಮಾಶ್ವಮೇಧಂ ನಿಜಭವನಮಥೋ ದರ್ಶಯಿತ್ವಾಽರ್ಜುನಾಯ ।**
**ಪುತ್ರಾನ್ ವಿಪ್ರಾಯ ದತ್ವಾ ಸಹಸಹಜಮಸೌ ದಂತವಕ್ತ್ರಂ ನಿಪಾತ್ಯ**
**ಪ್ರಾಪ್ಯಾಥ ದ್ವಾರಕಾಂ ಸ್ವಾಂ ಸಮವತು ವಿಹರನ್ನುದ್ಧವಾಯೋಕ್ತತತ್ವಃ ॥ 27 ॥**

**ಅನ್ವಯಾರ್ಥ :-** (ಯಃ = ಶ್ರೀಕೃಷ್ಣನು) ಯದೂನಾಂ = ಯಾದವರ, ಸ್ಥಾನಂ – ಆವಾಸಸ್ಥಾನವಾದ ದ್ವಾರಕೆಗೆ, ಪ್ರಾಪ್ಯ = ಬಂದವನಾಗಿ, ಪ್ರಿಯಸಖಂ = ಪ್ರೀತ್ಯಾಸ್ಪದನೂ, ಮಿತ್ರನೂ ಆದ, ಕುಚೇಲಂ – ಕುಚೇಲನನ್ನು, ಅವಾಪ್ತಕಾಮಂ = ಹೊಂದಲ್ಪಟ್ಟ ಸಮಸ್ತ ವಾಂಛಿತಗಳುಳ್ಳವನಾಗಿ, ಅಕೃತ = ಮಾಡಿದನು. ಅಥೋ = ಅನಂತರ, ಅಶ್ವಮೇಧಂ = ಅಶ್ವಮೇಧವೆಂಬ, ಕರ್ಮ = ಯಜ್ಞವನ್ನು, ಕುರ್ವನ್ = ಮಾಡುವವನಾಗಿ, ನಿಜಭವನಂ = ತನ್ನ ಮಂದಿರವಾದ ಅನಂತಾಸನವನ್ನು, ಅರ್ಜುನಾಯ – ಅರ್ಜುನನಿಗೆ, ದರ್ಶಯಿತ್ವಾ – ತೋರಿಸಿ, ಪುತ್ರಾನ್ = ಕುಮಾರರನ್ನು, ವಿಪ್ರಾಯ = ಬ್ರಾಹ್ಮಣನಿಗೆ, ದತ್ವಾ – ಕೊಟ್ಟು, ಸಹಸಹಜಂ = ಸಹೋದರನಿಂದ ಯುಕ್ತನಾದ, ದಂತವಕ್ತ್ರಂ = ದಂತವಕ್ತ್ರನೆಂಬ ದೈತ್ಯನನ್ನು, ನಿಪಾತ್ಯ – ಸಂಹರಿಸಿ, ಅಥ = ಅನಂತರ, ಸ್ವಾಂ = ತನ್ನದಾದ, ದ್ವಾರಕಾಂ – ದ್ವಾರಕಾಪಟ್ಟಣಕ್ಕೆ, ಪ್ರಾಪ್ಯ ಬಂದು, ವಿಹರನ್ = ಕ್ರೀಡಿಸುವವನಾಗಿ, ಉದ್ಧವಾಯ = ಉದ್ಧವನಿಗೆ, ಉಕ್ತತತ್ವಃ = ಅನೇಕ ತತ್ವಗಳನ್ನು ಉಪದೇಶಿಸಿದ ಅಸೌ = ಶ್ರೀಕೃಷ್ಣನು, ಸಮವತು (ಮಾಮಿತಿ ಶೇಷಃ) = ನನ್ನನ್ನು ರಕ್ಷಿಸಲಿ.

**ವಿಗ್ರಹವಾಕ್ಯ :-** ಪ್ರಿಯಶ್ಚಾಸೌ ಸಖಾ ಚ ಪ್ರಿಯಸಖಃ, ತಂ ಪ್ರಿಯಸಖಮ್ । ಅವಾಪ್ತಾಃ ಕಾಮಾಃ ಯೇನ ಸಃ ಅವಾಪ್ತಕಾಮಃ, ತಂ ಅವಾಪ್ತಕಾಮಮ್ । ನಿಜಂ ಚ ತತ್ ಭವನಂ ಚ ನಿಜಭವನಂ ತತ್ । ಸಹಜೇನ ಸಹ ವರ್ತತ ಇತಿ ಸಹಸಹಜಃ, ತಮ್ । ಉಕ್ತಾನಿ ತತ್ತ್ವಾನಿ ಯೇನ ಸಃ ಉಕ್ತತತ್ತ್ವಃ ।

**ತಾತ್ಪರ್ಯ :-** ಶ್ರೀಕೃಷ್ಣನು ಧರ್ಮಿಷ್ಠರಾದ ಪಾಂಡವರಿಗೆ ಸಾಮ್ರಾಜ್ಯ ಪ್ರಾಪ್ತಿಯಾದಮೇಲೆ ಅವರಿಂದ ಬೀಳ್ಕೊಂಡು ತನ್ನ ಸಕಲ ಯಾದವಬಾಂಧವರೊಡನೆ ದ್ವಾರಕಾ ಪಟ್ಟಣಕ್ಕೆ ಬಂದು ಅಲ್ಲಿ ಸುಖವಾಗಿ ವಾಸಿಸುತ್ತಿದ್ದನು. ಒಮ್ಮೆ ಶ್ರೀಕೃಷ್ಣನಿಗೆ ಬಹು ಪ್ರಿಯಕರನೂ, ಆಪ್ತಸಖನೂ, ಗುರುಕುಲದಲ್ಲಿ ಶ್ರೀಕೃಷ್ಣನೊಡನೆ ವಾಸಿಸುತ್ತಾ ಅಧ್ಯಯನ ಮಾಡುತ್ತಿದ್ದ ಕುಚೇಲನು ಶ್ರೀಕೃಷ್ಣನನ್ನು ಕಾಣಲು ಬಂದನು. ಕುಚೇಲನು ಶಮದಮಾದಿ ಗುಣ ಸಂಪನ್ನನೂ, ಯದೃಚ್ಛಾಲಾಭ ಸಂತುಷ್ಟನೂ ಆಗಿದ್ದನು. ಆದರೆ ದಾರಿದ್ರ್ಯದೋಷದಿಂದ ಕೃಶನಾಗಿದ್ದನು. ಅವನ ಪತ್ನಿಯು, ''ಸ್ವಾಮಿ, ಪ್ರಾಣವಲ್ಲಭರೇ! ನಿಮಗೆ ಸಾಕ್ಷಾತ್ ಶ್ರೀಪತಿಯಾದ ನಂದನಂದನನು ಸಖನಾಗಿದ್ದಾನೆ. ಅವನು ''ಬ್ರಹ್ಮಣ್ಯಶ್ಚ ಶರಣ್ಯಶ್ಚ ಭಗವಾನ್ ಸಾತ್ವತರ್ಷಭಃ ॥ ತಮುಪೈಹಿ ಮಹಾಭಾಗಂ ಸಾಧೂನಾಂ ಚ ಪರಾಯಣಮ್ ॥ ದಾಸ್ಯತಿ ದ್ರವಿಣಂ ಭೂರಿ ಸೀದತೇ ತೇ ಕುಟುಂಬಿನೇ ॥ '' ಸ್ವಾಮಿ, ನಿಮ್ಮ ಮಿತ್ರನಾದ ಶ್ರೀಕೃಷ್ಣನು ಬ್ರಾಹ್ಮಣಪ್ರಿಯನು, ಶರಣಾಗತ ರಕ್ಷಕನು. ಷಡ್ಗುಣೈಶ್ವರ್ಯ ಸಂಪನ್ನನು. ಮತ್ತು ಪರಾಕ್ರಮ-ಶಾಲಿಯು. ನೀವು ಅವನ ಬಳಿಗೆ ಹೋಗಿ ಅವನ ದರ್ಶನ ಮಾಡಿರಿ. ದೊಡ್ಡ ಕುಟುಂಬಿಗಳೂ, ದಾರಿದ್ರ್ಯದಿಂದ ದುಃಖಿತರೂ ಆದ ನಿಮಗೆ ಅವನು ಹೆಚ್ಚಾದ ಸಿರಿ ಸಂಪತ್ತುಗಳನ್ನು ಅನುಗ್ರಹಿಸುತ್ತಾನೆ'' ಮುಂತಾಗಿ ಹೇಳಲು ''ಅಯಂ ಹಿ ಪರಮೋ ಲಾಭಃ ಉತ್ತಮಶ್ಲೋಕದರ್ಶನಂ'' ಮಹಾತ್ಮರಿಂದ ಸ್ತುತ್ಯರಾದವರ ದರ್ಶನವೇ ಒಂದು ಪರಮಲಾಭವೆಂದು ಮನದಲ್ಲಿ ಯೋಚಿಸಿ ಕುಚೇಲನು ಕೃಷ್ಣದರ್ಶನಾಕಾಂಕ್ಷಿಯಾಗಿ ದ್ವಾರಕೆಗೆ ಆಗಮಿಸಿದನು. ತನ್ನನ್ನು ಕಾಣಲು ಬಂದ ಪ್ರಿಯಸಖನಾದ ಕುಚೇಲನನ್ನು ಕಂಡು ಶ್ರೀಕೃಷ್ಣನು ಪರಮಾನಂದಭರಿತನಾಗಿ ಅವನನ್ನು ಬರಸೆಳೆದು ಆಲಂಗಿಸಿ ದಿವ್ಯಹಂಸತೂಲಿಕಾತಲ್ಪದಲ್ಲಿ ಕುಚೇಲನನ್ನು ಕೂಡಿಸಿ, ಅರ್ಘ್ಯ ಪಾದ್ಯಗಂಧಪುಷ್ಪಾಕ್ಷತಾದಿ ನಾನಾವಿಧೋಪಚಾರಗಳಿಂದ ಪೂಜಿಸಿ, ಷಡ್ರಸೋಪೇತವಾದ ಉತ್ತಮ ಭೋಜನವನ್ನು ಮಾಡಿಸಿ, ಅವನು ತನಗೆ ಕಾಣಿಕೆಯಾಗಿ ತಂದ ಅವಲಕ್ಕಿಯನ್ನು ಸ್ವೀಕರಿಸಿ, ಸ್ವಲ್ಪ ತಿಂದು ತಾಂಬೂಲವನ್ನು ಮೆಲ್ಲುತ್ತಾ ಅವನೊಡನೆ ತಾವು ಗುರುಕುಲದಲ್ಲಿ ವಾಸಮಾಡುತ್ತಿರುವಾಗ ನಡೆದ ಅನೇಕ ವ್ಯಾಪಾರ, ವಿನೋದಾದಿ ವಿಚಾರಗಳನ್ನು ಪರಸ್ಪರ ಹೇಳಿಕೊಳ್ಳುತ್ತಾ ಹರ್ಷದಿಂದ ಸಲ್ಲಾಪಿಸುತ್ತಾ ಅಂದು ರಾತ್ರಿಯನ್ನು ಕಳೆದು ಮರುದಿನ ಕುಚೇಲನನ್ನು ಊರಿಗೆ ಕಳುಹಿಸಿಕೊಟ್ಟು, ಅವನು ಹೊರಟಕೂಡಲೇ ಅತ್ತ ಅವನ ಗೃಹವನ್ನು ದೇವೇಂದ್ರ-ಭವನದಂತೆ ಸಿರಿಸಂಪತ್ತು ವೈಭವಗಳಿಂದ ಪರಿಪೂರ್ಣವಾಗಿ ಕಂಗೊಳಿಸುವಂತೆ ಮಾಡಿ ಕುಚೇಲನಿಗೆ ಬಹುಭಾಗ್ಯವನ್ನು ಕರುಣಿಸಿದನು.

ಮತ್ತೊಮ್ಮೆ ಪರಮಪ್ರಿಯರಾದ ಪಾಂಡವರು, ಮತ್ತು ನಾನಾದೇಶಗಳಿಂದ ರಾಜಾಧಿರಾಜರು, ಋಷಿಮುನಿಗಳನ್ನು ಕರೆಯಿಸಿಕೊಂಡು ಅಶ್ವಮೇಧವೆಂಬ ಮಹಾಯಜ್ಞವನ್ನು ಪ್ರಾರಂಭಿಸಿದನು. ಅಶ್ವಮೇಧಯಾಗ ದೀಕ್ಷಾಬದ್ಧನಾಗಿ ಪವಿತ್ರಪಾಣಿಯಾಗಿ ಕುಳಿತಿದ್ದ ಶ್ರೀಕೃಷ್ಣನ ಬಳಿಗೆ ಬಂದು ಓರ್ವ ಬ್ರಾಹ್ಮಣನು ಗೋಳಿಡುತ್ತಾ, ''ದೇವ, ಶ್ರೀಕೃಷ್ಣ ! ನನ್ನ ಪುತ್ರನನ್ನು ರಕ್ಷಿಸು! ಹುಟ್ಟಿದ ಕೂಡಲೇ ನನ್ನ ಮಕ್ಕಳು ಮಾಯವಾಗುತ್ತಿದ್ದಾರೆ. ನನ್ನ ಪತ್ನಿಯು ಈಗ ಪ್ರಸವಿಸುವ ಕಾಲ ಪ್ರಾಪ್ತವಾಗಿದೆ. ಸ್ವಾಮಿ, ಪುತ್ರರನ್ನು ರಕ್ಷಿಸಿ ಕಾಪಾಡು'' ಎಂದು ಬಹು ದುಃಖದಿಂದ ವಿಜ್ಞಾಪಿಸಿದನು.

ಅಲ್ಲಿಯೇ ನಿಂತಿದ್ದ ಅರ್ಜುನನು ಆ ಬ್ರಾಹ್ಮಣನನ್ನು ನೋಡಿ ''ವಿಪ್ರೋತ್ತಮ, ಶ್ರೀಕೃಷ್ಣನು ದೀಕ್ಷಾಬದ್ಧನಾಗಿದ್ದಾನೆ. ನೀನು ಚಿಂತಿಸದಿರು. ತ್ರಿಲೋಕವಿಜಯಿಯಾದ ಈ ವಿಜಯನು ನಿನ್ನ ಪುತ್ರರನ್ನು ರಕ್ಷಿಸುವ ಸಮರ್ಥನಿದ್ದಾನೆ. ಅಯ್ಯಾ! ಅಳದಿರು. ಇಕೋ ಪ್ರಮಾಣಪೂರ್ವಕ ಹೇಳುತ್ತೇನೆ ಕೇಳು. ನಿನ್ನ ಪುತ್ರರನ್ನು ಖಂಡಿತ ಸಂರಕ್ಷಿಸುವೆನು'' ಎಂದು ಗರ್ವದಿಂದ ನುಡಿದನು. ಅದನ್ನಾಲಿಸಿದ ಶ್ರೀಕೃಷ್ಣನು ಮುಗುಳುನಗೆಯನ್ನು ಹೊರಸೂಸುತ್ತಾ, ''ಅರ್ಜುನ! ಪಣತೊಡದಿರು! ವಿಪ್ರಪುತ್ರರನ್ನು ರಕ್ಷಿಸಲು ಶಕ್ತಿ ನಿನಗಿಲ್ಲ'' ಎಂದು ನುಡಿಯಲು ಸ್ವಭುಜಬಲ ಪರಾಕ್ರಮಗರ್ವದಿಂದ ಮತ್ತನಾದ ಅರ್ಜುನನು. ''ಕೃಷ್ಣ! ಲೋಕೈಕವೀರನಾದ ನನಗೆ ಈ ಬ್ರಾಹ್ಮಣನ ಕುಮಾರರನ್ನು, ರಕ್ಷಿಸಲು ಸಾಮರ್ಥ್ಯವಿಲ್ಲವೆ? ಇದೆಂತಹ

ಮಾತು ಮಾಧವ! ಕೇಳು, ಖಂಡಿತ ವಿಪ್ರಪುತ್ರರನ್ನು ರಕ್ಷಿಸುತ್ತೇನೆ. ಆ ಕಾರ್ಯದಲ್ಲಿ ನಾನು ವಿಫಲನಾದಲ್ಲಿ ಅಗ್ನಿಪ್ರವೇಶ ಮಾಡುತ್ತೇನೆ'' ಎಂದು ಹೇಳಲು, ನಸುನಗುತ್ತಾ ಶ್ರೀಕೃಷ್ಣನು ವಿಪ್ರ ಮತ್ತು ಅರ್ಜುನರಗೆ ಅಪ್ಪಣೆಯಿತ್ತು ಕಳಿಸಿದನು. ಅರ್ಜುನನು ಬ್ರಾಹ್ಮಣನೊಡನೆ ಅವನ ಆಶ್ರಮಕ್ಕೆ ತೆರಳಿ ವಿಪ್ರಪತ್ನಿಯು ಪ್ರಸವಿಸುವ ಕಾಲ ಪ್ರಾಪ್ತವಾಗಿದೆಯೆಂದರಿತು ಶಸ್ತ್ರಗಳಿಂದ ಆ ಗೃಹಕ್ಕೆ ದಿಗ್ಬಂಧನಮಾಡಿ ಸ್ವಯಂ ಗಾಂಡೀವಧಾರಿಯಾಗಿ ಪ್ರಸವಗೃಹದ ಮುಂಭಾಗದಲ್ಲಿ ಸನ್ನದ್ಧನಾಗಿ ನಿಂತನು. ಆದರೆ ವಿಧಿಯ ವೈಚಿತ್ರ್ಯಕ್ಕೆ ಎಣೆಯುಂಟೆ! ಬ್ರಾಹ್ಮಣ ಪತ್ನಿಯು ಪುತ್ರನನ್ನು ಪ್ರಸವಿಸಿದಳು. ಆದರೇನು! ಹುಟ್ಟುತ್ತಲೇ ಆ ಮಗುವು ಹಿಂದಿನಂತೆಯೇ ಮಾಯವಾಗಿಬಿಟ್ಟಿತು! ಅರ್ಜುನನು ದಿಗ್ಭ್ರಾಂತನಾಗಿ ವಿಪ್ರಪುತ್ರನನ್ನು ರಕ್ಷಿಸಲಾಗದೆ ಮುಖವನ್ನು ತಗ್ಗಿಸಿ ಶ್ರೀಕೃಷ್ಣನೆಡೆಗೆ ಬಂದು ಚಿತೆಯನ್ನು ಸಿದ್ಧಪಡಿಸಿ ಅಗ್ನಿಯಲ್ಲಿ ಪ್ರವೇಶಿಸಲು ಉದ್ಯುಕ್ತನಾಗಲು, ಅರ್ಜುನನನ್ನು ತಡೆದು ಶ್ರೀಕೃಷ್ಣನು ಬ್ರಾಹ್ಮಣ ಅರ್ಜುನರೊಡನೆ ರಥವನ್ನೇರಿ ಉತ್ತರ ದಿಕ್ಕನ್ನು ಕುರಿತು ಪ್ರಯಾಣ ಬೆಳೆಸಿ ಸಪ್ತಸಮುದ್ರಗಳನ್ನೂ, ಸಪ್ತದ್ವೀಪಗಳನ್ನೂ ಕ್ಷಣದಲ್ಲಿ ದಾಟಿ, ಲೋಕಾಲೋಕಪರ್ವತವನ್ನೂ ಅತಿಕ್ರಮಿಸಿ, ಅಲ್ಲಿದ್ದ ಅತಿನಿಬಿಡವಾದ ಅಂಧಕಾರವನ್ನು ಚಕ್ರದಿಂದ ಸೀಳಿ, ಘನೋದಕವನ್ನೂ ದಾಟಿ, ಅನಂತಾಸನವೆಂಬ ತನ್ನ ಪರಮಶ್ರೇಷ್ಠವಾದ ಮಂದಿರವನ್ನು ಅರ್ಜುನನಿಗೆ ತೋರಿಸಿ ದೂರದಲ್ಲಿ ರಥವನ್ನು ನಿಲ್ಲಿಸಿ, ಅರ್ಜುನ ಮತ್ತು ಬ್ರಾಹ್ಮಣರನ್ನು ಅಲ್ಲಿಯೇ ಇರಲು ಹೇಳಿ, ಸ್ವಮಂದಿರವಾದ ಅನಂತಾಸನವನ್ನು ಪ್ರವೇಶಿಸಿ ಶೇಷಶಾಯಿಯಾಗಿ ಅಷ್ಟಭುಜಕಿರೀಟ ಮಕರಕುಂಡಲ ವೈಜಯಂತೀಮಾಲಾ, ವನಮಾಲಾ ಪೀತಾಂಬರಾದಿಗಳಿಂದ ಅಲಂಕೃತನಾದ ಜ್ಞಾನಾನಂದಸ್ವರೂಪನಾದ ಶ್ರೀಲಕ್ಷ್ಮೀ-ನಾರಾಯಣನಲ್ಲಿ ಐಕ್ಯನಾಗಿ ಒಂದು ಮುಹೂರ್ತ ತಾನೇ ಜಗಜ್ಜನ್ಮಾದಿಕಾರಣನಾದ ಶ್ರೀಹರಿಯೆಂದು ಜಗತ್ತಿಗೆ ತೋರಲು ಶ್ರೀಲಕ್ಷ್ಮೀನಾರಾಯಣರೂಪನಾಗಿದ್ದು; ವಿಪ್ರಪುತ್ರರಾಗಿ ತನ್ನ ಆಣತಿಯಂತೆ ಜನಿಸಿದ್ದ; ಅರ್ಜುನನ ಅಹಂಕಾರವನ್ನು ಪರಿಹರಿಸಲು ಶ್ರೀಹರಿರೂಪದಿಂದ ಅಲ್ಲಿಗೆ ಕರೆತಂದಿದ್ದ ತನ್ನ ದ್ವಾರಪಾಲಕರಾದ ಸುನಂದಾದಿಗಳನ್ನು (ವಿಪ್ರಪುತ್ರರನ್ನು) ಕರೆದುಕೊಂಡು ಅಪ್ರಾಕೃತವಾದ ಅನಂತಾಸನದಿಂದ ಹೊರಟು ಬ್ರಾಹ್ಮಣ - ಅರ್ಜುನರೊಡನೆ ರಥದಲ್ಲಿ ಕುಳಿತು ಪೂರ್ವದಂತೆ ಸಮುದ್ರಾದಿಗಳನ್ನು ದಾಟಿ ಬ್ರಾಹ್ಮಣನಿಗೆ ಅವನ ಪುತ್ರರನ್ನು ಪ್ರದಾನಮಾಡಿ, ಅಹಂಕಾರರಹಿತನಾದ ಅರ್ಜುನನಿಂದ ಸ್ತುತ್ಯನಾಗಿ ಅವನೊಡನೆ ಯಾಗಶಾಲೆಗೆ ಬಂದು ಲೋಕಶಿಕ್ಷಣಕ್ಕಾಗಿ ಅರ್ಧಮುಹೂರ್ತಕಾಲ ಯಜ್ಞವಿಚ್ಛೇದವಾದ್ದರಿಂದ ತನ್ನಿಮಿತ್ತವಾದ ಪ್ರಾಯಶ್ಚಿತ್ತರೂಪಕರ್ಮಗಳನ್ನಾಚರಿಸಿ, ಯಜ್ಞವನ್ನು ಪೂರ್ಣಗೊಳಿಸಿ, ಯಜ್ಞಕ್ಕೆ ಬಂದಿದ್ದ ಬ್ರಹ್ಮಾದಿಗಳನ್ನು ಲೋಕಶಿಕ್ಷಾರ್ಥವಾಗಿ ಪೂಜಿಸಿ (ಪೂಜಿಸಿದಂತೆ ನಟಿಸಿ) ತನ್ನ ಪತ್ನೀಪುತ್ರಪೌತ್ರಾದಿಗಳು ಮತ್ತು ಬಾಂಧವರಿಂದೊಡಗೂಡಿ ಯಮುನೆಯಲ್ಲಿ ಅವಭೃತಸ್ನಾನಮಾಡಿ, ವಸ್ತ್ರಭೂಷಣಾದಿಗಳಿಂದ ಚೆನ್ನಾಗಿ ಅಲಂಕೃತನಾಗಿ ರಥವನ್ನೇರಿ ಸ್ವಜನರೊಡನೆ ದ್ವಾರಕೆಗೆ ಪ್ರಯಾಣ ಬೆಳೆಸಿದನು.

ಮಾರ್ಗಮಧ್ಯದಲ್ಲಿ ಪರಮಾಪ್ತನಾದ ಶಿಶುಪಾಲನನ್ನು ಸಂಹರಿಸಿದ ಕೋಪದಿಂದ ದಂತವಕ್ತ್ರನು ದೊಡ್ಡಸೇನೆಯೊಡನೆ ಶ್ರೀಕೃಷ್ಣನೊಡನೆ ಯುದ್ಧಕ್ಕಾಗಿ ಧಾವಿಸಿ ಬಂದನು. ಶ್ರೀಕೃಷ್ಣನು ಗದಾಪ್ರಹಾರದಿಂದ ದಂತವಕ್ತ್ರನನ್ನು ಸಂಹರಿಸಿ, ಅವನ ದೇಹದಲ್ಲಿದ್ದ ''ವಿಜಯ''ನೆಂಬ ದ್ವಾರಪಾಲಕನನ್ನು ಅನುಗ್ರಹಿಸಿ, ಅವನಲ್ಲಿ ಆವಿಷ್ಟನಾಗಿದ್ದ ಅಸುರನನ್ನು ತಮಸ್ಸಿನಲ್ಲಿ ತಳ್ಳಿ, ದಂತವಕ್ತ್ರನ ಸಹೋದರನಾದ ವಿಡೂರಥನನ್ನು ಚಕ್ರದಿಂದ ಸಂಹರಿಸಿ ತಮಸ್ಸಿನಲ್ಲಿ ತಳ್ಳಿ, ಅವರ ಸೈನ್ಯವನ್ನು ಸಂಪೂರ್ಣವಾಗಿ ನಾಶಗೊಳಿಸಿ ಅವರ ಗಜತುರಗಾದಿಗಳನ್ನು ಸ್ವೀಕರಿಸಿ ದೇವತೆಗಳೇ ಮೊದಲಾದವರಿಂದ ಸ್ತುತ್ಯನಾಗಿ ದ್ವಾರಕಾಪಟ್ಟಣಕ್ಕೆ ದಯಮಾಡಿಸಿ, ಅಲ್ಲಿ ಹದಿನಾರುಸಾವಿರದ ನೂರುಜನ ಪತ್ನಿಯರು, ರುಕ್ಮಿಣೀ ಮುಂತಾದ ಪಟ್ಟದರಾಣಿ ಮೊದಲಾ-ದವರೊಡನೆ ಅನೇಕ ರೂಪಗಳಿಂದ ಕ್ರೀಡಿಸುತ್ತಾ ಪುತ್ರರು, ಪೌತ್ರರೇ ಮೊದಲಾದ ಸಕಲ ಬಾಂಧವರಿಂದ ಯುಕ್ತನಾಗಿ ಸಕಲರನ್ನೂ ಆನಂದ ಗೊಳಿಸಿ, ತನ್ನ ಭಕ್ತನಾದ ಉದ್ಧವನಿಗೆ ಅನೇಕ ತತ್ವಗಳನ್ನು ಉಪದೇಶಿಸಿ ಸುಖದಿಂದ ಕಂಗೊಳಿಸಿದನು, ಮುಂತಾದ ಕಥಾಭಾಗವು ಈ ಪದ್ಯದಿಂದ ಸೂಚಿತವಾಗುವುದು.

**ಅಲಂಕಾರಗಳು:-** ಇಲ್ಲಿಯೂ ''ಸಾರ, ಅಸಂಭವ, ವಿಶೇಷ''ಗಳೆಂಬ ಅಲಂಕಾರಗಳಿವೆ.

ಇಲ್ಲಿ ''ಅಕೃತ, ಸಮವತು'' ಎಂಬ ಎರಡು ಕ್ರಿಯಾಪದಗಳಿವೆ. ''ಸಂ'' ಉಪಸರ್ಗ ಪೂರ್ವಕ ''ಅವ-ರಕ್ಷಣೇ'' ಎಂಬ ಧಾತುವಿನ ಸಕರ್ಮಕ ಕರ್ತರಿ ಲೋಟ್ ಪರಸ್ಮೈಪದಿ ಪ್ರಥಮಪುರುಷ ಏಕವಚನದಲ್ಲಿ ''ಸಮವತು'' ಎಂದಾಗಿದೆ.

| | | | |
|---|---|---|---|
| **ರೂಪ :-** | ಅವತು, ಅವತಾತ್ | ಅವತಾಂ | ಅವಂತು |
| | ಅವ, ಅವತಾತ್ | ಅವತಂ | ಅವತ |
| | ಅವಾನಿ | ಅವಾವ | ಅವಾಮ ॥ 27 ॥ |

**ರಕ್ಷನ್ ಲೋಕಾನ್ ಸಮಸ್ತಾನ್ನಿಜಜನನಯನಾನಂದಕಾರೀ ನಿರಸ್ತಾ-**
**ವದ್ಯಸೌಖ್ಯೈಕಮೂರ್ತಿಸ್ಸುರತರುಕುಸುಮೈಃ ಕೀರ್ಯಮಾಣೋಽಮರೇಂದ್ರೈಃ ।**
**ಸಿದ್ಧೈರ್ಗಂಧರ್ವಪೂರ್ವೈರ್ಜಯಜಯವಚನೈಃ ಸ್ತೂಯಮಾನೋಽತ್ರ ಕೃಷ್ಣಃ**
**ಸ್ತ್ರೀಭಿಃ ಪುತ್ರೈಶ್ಚ ಪೌತ್ರೈಃ ಸ ಜಯಿತಿ ಭಗವಾನ್ ಸರ್ವಸಂಪತ್ಸಮೃದ್ಧಃ ॥ 28 ॥**

**ಅನ್ವಯಾರ್ಥ :-** ಸಮಸ್ತಾನ್ ಲೋಕಾನ್ = ಸಮಸ್ತ ಜನರನ್ನು, ಸಕಲ ಲೋಕಗಳನ್ನು, ರಕ್ಷನ್ = ಪಾಲನ ಮಾಡುತ್ತಾ, ನಿಜಜನನಯನಾನಂದಕಾರೀ – ನಿಜಜನ = ತನ್ನವರಾದ ಸಜ್ಜನರ, ನಯನ = ಕಣ್ಣುಗಳಿಗೆ, ಆನಂದಕಾರೀ = ಆನಂದವನ್ನುಂಟು ಮಾಡುವ, ನಿರಸ್ತಾವದ್ಯಃ – ನಿರಸ್ತ = ನಿರಾಕರಿಸಲ್ಪಟ್ಟ, ಅವದ್ಯಃ = ದೋಷಗಳುಳ್ಳ, ಸೌಖ್ಯೈಕಮೂರ್ತಿಃ – ಸೌಖ್ಯ – ಸುಖವೇ, ಏಕಾ = ಮುಖ್ಯವಾದ, ಮೂರ್ತಿಃ = ಶರೀರವಾಗುಳ್ಳ (ಆನಂದದೈಕಮೂರ್ತಿಯಾದ), ಅಮರೇಂದ್ರೈಃ – ದೇವಶ್ರೇಷ್ಠರಾದ ಬ್ರಹ್ಮಾದಿಗಳಿಂದ, ಸುರತರುಕುಸುಮೈಃ – ಸುರತರು – ಪಾರಿಜಾತ ಮುಂತಾದ ದೇವ ವೃಕ್ಷಗಳ, ಕುಸುಮೈಃ = ಪುಷ್ಪಗಳಿಂದ, ಕೀರ್ಯಮಾಣಃ – ಅಭೀಷೇಕ ಮಾಡಿಸಿಕೊಳ್ಳುವವನಾಗಿ, ಜಯಜಯವಚನೈಃ – ಜಯಜಯ = ಜಯಜಯ ವಾಸುದೇವ ಮುಂತಾದ ವಾಕ್ಯಗಳಿಂದ ಗಂಧರ್ವಪೂರ್ವೈಃ = ಗಂಧರ್ವರೇ ಮೊದಲಾದ, ಸಿದ್ಧೈಃ = ದೇವಗಾಯಕರಿಂದ ಸ್ತೂಯಮಾನಃ = ಸ್ತೋತ್ರ ಮಾಡಲ್ಪಟ್ಟವನಾಗಿ, ಭಗವಾನ್ = ಸಕಲ, ಐಶ್ವರ್ಯಾದಿ ಸದ್ಗುಣ ಸಂಪನ್ನನಾದ, ಸರ್ವಸಂಪತ್ಸಮೃದ್ಧಃ – ಸರ್ವ = ಸಕಲ ವಿಧವಾದ, ಸಂಪತ್ = ಐಶ್ವರ್ಯಗಳಿಂದ, ಸಮೃದ್ಧಃ = ಪೂರ್ಣನಾದ, ಸಃ – ದುಷ್ಟ ಶಿಕ್ಷಣ, ಶಿಷ್ಟರಕ್ಷಣ, ಭೂಭಾರ ಹರಣ, ಧರ್ಮಸಂಸ್ಥಾಪನಾದಿ ಅನೇಕ ವ್ಯಾಪಾರಗಳನ್ನು ಮಾಡಿದ ಶ್ರೀಕೃಷ್ಣ ಪರಮಾತ್ಮನು, ಸ್ತ್ರೀಭಿಃ = ರುಕ್ಮಿಣಿ ಸತ್ಯಭಾಮಾದಿ ಪತ್ನಿಯರಿಂದ, ಪುತ್ರೈಃ = ಪ್ರದ್ಯುಮ್ನ ಮೊದಲಾದ ಅನೇಕ ಮಕ್ಕಳುಗಳಿಂದ, ಪೌತ್ರೈಶ್ಚ = ಅನಿರುದ್ಧಾದಿ ಅನೇಕ ಮೊಮ್ಮಕ್ಕಳುಗಳಿಂದಲೂ (ಸಹ ಇತಿ ಶೇಷಃ) ಕೂಡಿದವನಾಗಿ, ಅತ್ರ = ಜಗತ್ತಿನಲ್ಲಿ, ಜಯತಿ = ಎಲ್ಲರಿಗಿಂತಲೂ ಉತ್ಕೃಷ್ಟನಾಗಿದ್ದಾನೆ.

**ವಿಗ್ರಹವಾಕ್ಯ :-** ನಿಜಾಶ್ಚ ತೇ ಜನಾಶ್ಚ ನಿಜಜನಾಃ ನಿಜಜನಾನಾಂ ನಯನಾನಿ ನಿಜಜನನಯನಾನಿ ತೇಷಾಂ ಆನಂದಂ ಕರೋತೀತಿ ನಿಜಜನನಯನಾನಂದಕಾರೀ ॥ ನಿರಸ್ತಾನಿ ಅವದ್ಯಾನಿ ಯೇನ ಸಃ ನಿರಸ್ತಾವದ್ಯಃ । ಸೌಖ್ಯಂ ಏಕಾ ಮೂರ್ತಿಃ ಯಸ್ಯ ಸಃ ಸೌಖ್ಯೈಕಮೂರ್ತಿಃ ॥ ಸುರಾಣಾಂ ತರವಃ ಸುರತರವಃ, ಸುರತರೂಣಾಂ ಕುಸುಮಾನಿ ಸುರತರು ಕುಸುಮಾನಿ, ತೈಃ ಸುರತರುಕುಸುಮೈಃ ॥ ಅಮರೇಷು ಇಂದ್ರಾಃ ಅಮರೇಂದ್ರಾಃ ತೈಃ ಅಮರೇಂದ್ರೈಃ ॥ ಗಂಧರ್ವಾಃ ಪೂರ್ವೇ ಯೇಷಾಂ ತೇ ಗಂಧರ್ವಪೂರ್ವಾಃ ತೈಃ ಗಂಧರ್ವಪೂರ್ವೈಃ ॥ ಜಯಜಯ ಇತಿ ವಚನಾನಿ ಜಯಜಯವಚನಾನಿ ತೈಃ ಜಯ

ಜಯಯವಚನೈಃ ॥ ಸರ್ವಾಶ್ಚ ತಾಃ ಸಂಪದಶ್ಚ ಸರ್ವಸಂಪದಃ, ಸಮ್ಯಕ್ ಋದ್ಧಃ ಸಮೃದ್ಧಃ, ಸರ್ವಸಂಪದ್ಭಿಃ ಸಮೃದ್ಧಃ ಸರ್ವಸಂಪತ್ಸಮೃದ್ಧಃ ॥

**ತಾತ್ಪರ್ಯ :-** ಲೋಕಕಂಟಕರಾದ ಕಂಸ-ಜರಾಸಂಧಾದಿ ದುಷ್ಟಶಿಕ್ಷಣ, ಋಷಿ ಮುನಿಗಳು, ಪಾಂಡವರೇ ಮೊದಲಾದ ಸಜ್ಜನರ ಪಾಲನ, ಭೂಭಾರಹರಣ, ಧರ್ಮ ಸಂಸ್ಥಾಪನಾ, ತತ್ತೋಪದೇಶದ್ವಾರಾ ಮುಮುಕ್ಷುಗ್ಗಳಾದ ಸರ್ವಸಜ್ಜನೋದ್ಧಾರಾದಿ ಮಂಗಳಕರ ಕಾರ್ಯಗಳನ್ನೆಸಗಲು, ಅವತರಿಸಿದ ಸಾಕ್ಷಾತ್ನಾರಾಯಣಾಭಿನ್ನನೂ, ನಿಖಿಲ ದೋಷ-ವಿದೂರನೂ, ಆನಂದಮಯಮೂರ್ತಿಯೂ, ತನ್ನವರಾದ ಸಕಲ ಸಜ್ಜನರ ನಯನಾನಂದಕಾರಿಯೂ ಆದ ಶ್ರೀಕೃಷ್ಣ-ಪರಮಾತ್ಮನು ತನ್ನ ಅವತಾರ ಕಾರ್ಯಗಳನ್ನು ಬಹು ಯಶಸ್ವಿಯಾಗಿ ನಿರ್ವಹಿಸಿ ಸಮಸ್ತ ಲೋಕಗಳನ್ನು ಸಕಲಜನರನ್ನೂ ಪರಿಪಾಲಿಸುತ್ತಾ ಬ್ರಹ್ಮರುದ್ರಾದಿ ಸಕಲ ದೇವಶ್ರೇಷ್ಠರಿಂದ ದೇವಲೋಕದ ಪಾರಿಜಾತಾದಿ ಕುಸುಮಗಳಿಂದ ಅಭಿಷಿಕ್ತನಾಗುತ್ತಾ ಗಂಧರ್ವರೇ ಮೊದಲಾದ ದೇವಗಾಯಕರಿಂದ ತನ್ನ ಅಮರಚರಿತ ಲೀಲಾವಿಲಾಸ ನಿರೂಪಣಪರ ಗಾಯನಗಳಿಂದ ''ಜಯಜಯ ವಾಸುದೇವ'' ಮುಂತಾಗಿ ಸ್ತುತಿಸಿಕೊಳ್ಳುತ್ತಾ ಸಕಲ ವಿಧ ಸಿರಿ ಸಂಪತ್ತುಗಳಿಂದ ಪೂರ್ಣನಾಗಿ ಪಟ್ಟ-ಮಹಿಷಿಯರಾದ ರುಕ್ಮಿಣೀ ಸತ್ಯಭಾಮಾದಿ ಪತ್ನಿಯರಿಂದಲೂ, ಪ್ರದ್ಯುಮ್ನಾದಿ ಪುತ್ರರಿಂದಲೂ, ಅನಿರುದ್ಧಾದಿ ಮೊಮ್ಮ-ಕ್ಕಳುಗಳಿಂದಲೂ ಸಹಿತನಾಗಿ ಜಗತ್ತಿನಲ್ಲಿ ಎಲ್ಲರಗಿಂತಲೂ ಉತ್ಕರ್ಷದಿಂದ ರಾಜಿಸುತ್ತಿದ್ದಾನೆ. ಎಂದು ಭಾವವು.

**ವಿಶೇಷ ವಿಚಾರ**

ಈ ಪದ್ಯದಲ್ಲಿ ಕವಿಗಳು ''ಸೌಖ್ಯೈಕಮೂರ್ತಿ'' ಎಂಬ ವಿಶೇಷಣವನ್ನು ಶ್ರೀಕೃಷ್ಣನಿಗೆ ಕೊಟ್ಟಿದ್ದಾರೆ. ಇದನ್ನು ವ್ಯಾಖ್ಯಾನಕಾರರು ವ್ಯಾಕರಣ ವಿಶೇಷವನ್ನು ತಿಳಿಸುವುದರ ಮೂಲಕ ವಿವರಿಸಿದ್ದಾರೆ. ಅದು ಇಂತಿದೆ :- ಇದು ಸಮಸ್ತಪದ, ಇದರಲ್ಲಿ ಏಕಶಬ್ದವು ಸೇರಿದೆ. ಸಮಾಸದಲ್ಲಿ ಏಕಶಬ್ದಕ್ಕೆ ಸಂಖ್ಯಾವಾಚಕತ್ವವನ್ನು ಇಟ್ಟುಕೊಂಡಾಗ ಆ ಶಬ್ದವು ಪೂರ್ವ-ನಿಪಾತವಾಗುತ್ತದೆ. ಕೇವಲ ಎಂಬ ಅರ್ಥವನ್ನು ಇಟ್ಟುಕೊಂಡಾಗ ಅದು ಪರನಿಪಾತವಾಗುತ್ತದೆ. ಇಲ್ಲಿ ಪರನಿಪಾತ-ವಾಗಿರುವುದರಿಂದ ಕೇವಲ ಎಂಬ ಅರ್ಥವು ಇದೆ ಎಂಬುದು ಸ್ಪಷ್ಟ. ತಮ್ಮ ಈ ಹೇಳಿಕೆಗೆ ಕೋಶಕಾರರ ''ದೋಷೈಕ-ದೃಶ್‌ಪುರೋಭಾಗೀ'' ಎಂಬ ಪ್ರಯೋಗವನ್ನೂ, ಕಾವ್ಯಪ್ರಕಾಶಕಾರನ ''ಹ್ಲಾದೈಕಮಯಿಂ'' ಎಂಬ ಪ್ರಯೋಗವನ್ನೂ ಇವೆಲ್ಲಕ್ಕಿಂತಲೂ ವಿಶೇಷವಾಗಿ ಪರಮಪೂಜ್ಯರಾದ ಶ್ರೀಮದಾಚಾರ್ಯರ ಅನುವ್ಯಾಖ್ಯಾನ ಗ್ರಂಥದ ''ನಿಖಿಲಪೂರ್ಣ-ಗುಣೈಕದೇಹಂ'' ವಿಷ್ಣುತತ್ವನಿರ್ಣಯದ ''ಸದಾಗಮೈಕವಿಜ್ಞೇಯಂ'' ಎಂಬ ಪ್ರಯೋಗಗಳನ್ನೂ ಉದಾಹರಿಸಿ ಶ್ರೀಗುರು-ರಾಜರ ಪ್ರಯೋಗವು ಪರಮ ಪ್ರಾಮಾಣಿಕ ಪ್ರಯೋಗವೆಂಬುದನ್ನು ಭಕ್ತ್ಯಾದರ ಪೂರ್ವಕವಾಗಿ ಸಮರ್ಥಿಸಿದ್ದಾರೆ.

**ಜಯತಿ :-** ಜಿ ಎಂಬ ಧಾತುವಿಗೆ ಜಯ ಮತ್ತು ಅಭಿಭವ ಎಂಬ ಎರಡರ್ಥಗಳಿವೆ. ಮೊದಲನೆಯ ಅರ್ಥವ-ನ್ನಿಟ್ಟುಕೊಂಡಾಗ ಆ ಧಾತುವು ಅಕರ್ಮಕವಾಗುತ್ತದೆ. ಅದಕ್ಕೆ ಉತ್ಕರ್ಷ ಎಂದು ಅಭಿಪ್ರಾಯ. ಎರಡನೆಯ ಅರ್ಥವ-ನ್ನಿಟ್ಟುಕೊಂಡರೆ ಆ ಧಾತುವು ಸಕರ್ಮಕವಾಗುತ್ತದೆ. ಆಗ ಅದಕ್ಕೆ ಸೋಲಿಸುವುದು ಎಂದು ಅಭಿಪ್ರಾಯ. ಪ್ರಕೃತದಲ್ಲಿ ಈ ಧಾತುವು ಉಭಯಾರ್ಥದಲ್ಲಿಯೂ ಉಂಟು ಎಂಬುದನ್ನು ಶ್ರೀಗುರುರಾಜರ ಪ್ರಯೋಗಚಾತುರ್ಯನಿರೂಪಣಪೂರ್ವಕ ಭಕ್ತಿಪ್ರಕರ್ಷದಿಂದ ವ್ಯಾಖ್ಯಾನಕಾರರು ಸಮರ್ಥಿಸಿದ್ದಾರೆ.

**ಅಲಂಕಾರಗಳು :-** ಇಲ್ಲಿಯೂ ''ಸಾರ, ಅಸಂಭವ, ವಿಶೇಷ ಮತ್ತು ಕಾವ್ಯಲಿಂಗ'' ವೆಂಬ ನಾಲ್ಕು ಅಲಂಕಾರಗಳೂ ಇದ್ದು ಅವುಗಳ ಮಿಲನದಿಂದ ಸಂಸೃಷ್ಟಿಯಾಗಿದೆ. ಲಕ್ಷ್ಯ ಲಕ್ಷಣಗಳನ್ನು ಹಿಂದೆಯೇ ಕೊಡಲಾಗಿದೆ.

ಇಲ್ಲಿ ''ಜಿ-ಜಯೇ'' ಎಂಬ ಧಾತುವಿನ ಸಕರ್ಮಕ ಕರ್ತರೀ ಲಿಟ್ ಪರಸ್ಮೈಪದಿ ಪ್ರಥಮಪುರುಷ ಏಕವಚನದಲ್ಲಿ ''ಜಯತಿ'' ಎಂದಾಗಿದೆ.

**ರೂಪ :** ಜಯತಿ ಜಯತಃ ಜಯಂತಿ

ಜಯಸಿ ಜಯಥಃ ಜಯಥ

ಜಯಾಮಿ ಜಯಾವಃ ಜಯಾಮಃ ॥ 28 ॥

ಹೀಗೆ ಸ್ತೋತ್ರವನ್ನು ಮುಗಿಸಿ ಶ್ರೀರಾಘವೇಂದ್ರಮುನಿವರ್ಯರು ತಾವು ರಚಿಸಿದ ಸ್ತೋತ್ರಕ್ಕೆ ಹೆಸರಿಟ್ಟು ಯಾವುದೇ ಗ್ರಂಥವು ಸರ್ವಜನೋಪಾದೇಯವಾಗಬೇಕಾದಲ್ಲಿ ಅದಕ್ಕೆ ಪ್ರಾಮಾಣ್ಯವನ್ನು ತಂದುಕೊಡಬೇಕು. ಪ್ರಾಮಾಣ್ಯವು 'ಆಪ್ತಿಮೂಲತಯಾ ಚೈವ ಶ್ರುತಿಮೂಲತಯಾ ತಥಾ । ಯುಕ್ತಿಮೂಲತಯಾ ಚೈವ ಪ್ರಾಮಾಣ್ಯಂ ತ್ರಿವಿಧಂ ಮಹತ್ ॥'' ಆಪ್ತಿಮೂಲಕ, ಶ್ರುತಿಮೂಲಕ, ಯುಕ್ತಿ ಮೂಲಕವಾಗಿ ಪ್ರಾಮಾಣ್ಯವು ಮೂರು ಬಗೆಯಾಗಿದ್ದು ತಾವು ಮಾಡಿದ ಸ್ತೋತ್ರವು ವೇದಾನುಸಾರಿಯಾದ ಭಾಗವತಾದಿ ಪರಮಪ್ರಮಾಣಗಳಿಂದ ಪುರಾಣಗಳಲ್ಲಿ ಉಕ್ತವಾದ ವಿಷಯಗಳೇ ಆದ್ದರಿಂದಲೂ, ತಾವು ಪರಮಾಪ್ತರಾದುದರಿಂದಲೂ ತಮ್ಮ ಗ್ರಂಥವು ಉಪಾದೇಯವೆಂದು ತಿಳಿಸಿಕೊಡಲು ಪರಮಾಪ್ತರಾದ ತಮ್ಮ ನಾಮಕೀರ್ತನ ಪೂರ್ವಕ ತಮಗೂ, ತಮ್ಮವರಾದವರೆಲ್ಲರಿಗೂ ಅಂದರೆ ಗ್ರಂಥಕಾರರಾದ ತಮಗೂ ಈ ಗ್ರಂಥವು ಪಾರಾಯಣ ಮಾಡುವ ಸಜ್ಜನರಿಗೂ ಗ್ರಂಥಪ್ರತಿಪಾದ್ಯನಾದ ಶ್ರೀಕೃಷ್ಣನ ಪ್ರಸಾದ ಲಭ್ಯವಾಗಿ ಸಕಲವಿಧ ಅಭೀಷ್ಟಪ್ರದವಾಗಲಿ ಎಂದು ''ಇತಿ'' ಎಂಬ ಪದ್ಯದಿಂದ ಮಂಗಳವನ್ನು ಪ್ರಾರ್ಥಿಸುತ್ತಾರೆ.

**ಇತಿ ಶ್ರೀಕೃಷ್ಣಚಾರಿತ್ರಮಂಜರೀ ಲೇಶತಃ ಕೃತಾ ।**
**ರಾಘವೇಂದ್ರೇಣ ಯತಿನಾ ಭೂಯಾತ್ಕೃಷ್ಣಪ್ರಸಾದದಾ ॥ 29 ॥**

**ಅನ್ವಯಾರ್ಥ :-** ಇತಿ – ಈ ಪ್ರಕಾರವಾಗಿ, ರಾಘವೇಂದ್ರೇಣ ಯತಿನಾ = ಶ್ರೀ ರಾಘವೇಂದ್ರ ತೀರ್ಥರೆಂಬ ಯತಿವರರಿಂದ, ಲೇಶತಃ = ಸಂಕ್ಷೇಪವಾಗಿ, ಕೃತಾ = ಮಾಡಲ್ಪಟ್ಟ, ಶ್ರೀಕೃಷ್ಣಚಾರಿತ್ರಮಂಜರೀ – ಶ್ರೀಃ = ಸಂಪದ್ಯುಕ್ತನಾದ, ಕಾಂತಿಸಂಪನ್ನನಾದ, ವೇದಪ್ರತಿಪಾದ್ಯನಾದ, ಕೃಷ್ಣ = ಕೃಷ್ಣನ, ಚರಿತ್ರ = ಅವತಾರ ಲೀಲೆಗಳ ಮಂಜರೀ = ಗೊಂಚಲಿನಂತೆ ಪ್ರತಿಪಾದಕವಾದ ಮಂಜರೀ ಎಂಬ ಕಾವ್ಯವು, ಕೃಷ್ಣಪ್ರಸಾದದಾ – ಕೃಷ್ಣ = ಗ್ರಂಥಪ್ರತಿಪಾದ್ಯನಾದ ಕೃಷ್ಣನ, ಪ್ರಸಾದ = ಅನುಗ್ರಹವನ್ನು, ದಾ = ಕೊಡಿಸತಕ್ಕದ್ದಾಗಿ, ಭೂಯಾತ್ = ಆಗಲಿ. (ಈ ಸ್ತೋತ್ರವನ್ನು ಹೇಳುವ ಮತ್ತು ಕೇಳುವವರಿಗೆ ಪ್ರಸನ್ನನಾದ ಶ್ರೀಕೃಷ್ಣನು ಸರ್ವಾಭೀಷ್ಟಪ್ರದನಾಗುತ್ತಾನೆಂದು ಅರ್ಥ).

**ವಿಗ್ರಹವಾಕ್ಯ :-** ಕರ್ಷತೀತಿ ಕೃಷ್ಣಃ ಶ್ರೀಯುಕ್ತಶ್ಚಾಸೌ ಕೃಷ್ಣಶ್ಚ ಶ್ರೀಕೃಷ್ಣಃ ಶ್ರೀಕೃಷ್ಣಸ್ಯ ಚಾರಿತ್ರಾಣಿ ಶ್ರೀಕೃಷ್ಣಚಾರಿತ್ರಾಣಿ, ತೇಷಾಂ ಮಂಜರೀವ ಮಂಜರೀ ಶ್ರೀಕೃಷ್ಣ ಚಾರಿತ್ರಮಂಜರೀ । ಕೃಷ್ಣಸ್ಯ ಪ್ರಸಾದಃ ಕೃಷ್ಣಪ್ರಸಾದಃ ತಂ ದದಾತೀತಿ ಕೃಷ್ಣ ಪ್ರಸಾದದಾ ॥

**ತಾತ್ಪರ್ಯ :-** ಈ ಪ್ರಕಾರವಾಗಿ ಶ್ರೀರಾಘವೇಂದ್ರ ತೀರ್ಥಯತಿವರ್ಯರು ಸಂಕ್ಷೇಪವಾಗಿ ರಚಿಸಿದ ಶ್ರೀಕೃಷ್ಣನ ಚರಿತ್ರಗಳೆಂಬ ಮಂಜರಿಗಳಂತಿರುವ ಈ ಸ್ತೋತ್ರವು ಹೇಳುವ ಮತ್ತು ಕೇಳುವ ಸಕಲ ಜನರಿಗೂ ಶ್ರೀಕೃಷ್ಣನ ಪ್ರಸಾದವನ್ನು ಅಂದರೆ ಅನುಗ್ರಹರೂಪ ಸಕಲಾಭೀಷ್ಟಗಳನ್ನು ಕೊಡಿಸಿ ಕೊಡಲಿ ಎಂದು ಭಾವ.

॥ ಇತಿ ಸರ್ವಮತಿಮಂಗಲಮ್ ॥

ಇತಿ ಶ್ರೀರಾಘವೇಂದ್ರಗುರುಸಾರ್ವಭೌಮವಿರಚಿತ ಶ್ರೀಕೃಷ್ಣಚಾರಿತ್ರಮಂಜರಿಯು ಮುಗಿದುದು.

ಈಗ ಷಾಷ್ಟಿಕಕುಲದೀಪಕರೂ, ಶ್ರೀಮಂತ್ರಾಲಯಶ್ರೀಗಳವರ ಪೂರ್ವಾಶ್ರಮ ಪುತ್ರರೂ, ವಿದ್ವತ್ಕುಲತಿಲಕರೂ, ಋಗ್ಭಾಷ್ಯಟೀಕಾವಾಖ್ಯಾನಾದ್ಯನಿತರ ಸಾಧಾರಣ ಟಿಪ್ಪಣೀಕಾರರೂ ಆದ ಶ್ರೀ ಲಕ್ಷ್ಮೀನಾರಾಯಣಾಚಾರ್ಯರು ಶ್ರೀಗುರುರಾಜರ ಶ್ರೀಕೃಷ್ಣಚಾರಿತ್ರಮಂಜರಿಗೆ ರಚಿಸಿದ ''ಮಂಜರೀಮಾಲಾ'' ಎಂಬ ತಮ್ಮ ವ್ಯಾಖ್ಯಾನವನ್ನು ಮುಗಿಸಿ ''ಯತ್ಪ್ರಸಾದಾತ್'' ಎಂಬ ಪದ್ಯದಿಂದ ಮಂಗಳ ಮಾಡುತ್ತಾರೆ.

**ಯತ್ಪ್ರಸಾದಾತ್ಸಂಪದಸ್ಸ್ಯುಃ ಬ್ರಹ್ಮಾದೀನಾಂ ಶ್ರಿಯೋಽಪಿ ಚ ।**
**ನಮಸ್ತೇ ರುಕ್ಮಿಣೀಸತ್ಯಭಾಮಾಶ್ಲಿಷ್ಟಾಯ ಸರ್ವದಾ ॥**

**ತಾತ್ಪರ್ಯ :-** ಶ್ರೇಷ್ಠದೇವತೆಗಳಾದ ಶ್ರೀಬ್ರಹ್ಮರುದ್ರೇಂದ್ರಾದಿ ಸಮಸ್ತ ದೇವತೆಗಳಿಗೂ, ಶ್ರೀರಮಾದೇವಿಯರಿಗೂ ಸಹ ಯಾರ ಪ್ರಸಾದ (ಅನುಗ್ರಹದಿಂದ)ದಿಂದ ಸಕಲ ಸಂಪತ್ತುಗಳು, ಮಂಗಳಗಳೂ ಕೂಡ ಲಭಿಸುವುವೋ ಅಂಥ ಶ್ರೀರುಕ್ಮಿಣೀ ಸತ್ಯಭಾಮೆಯರಿಂದ ಆಲಿಂಗಿತನಾದ (ಶ್ರೀಕೃಷ್ಣ) ನಿನಗೆ ಸರ್ವದಾ ನಮಸ್ಕಾರಗಳು.

**ಲಕ್ಷ್ಮೀನಾರಾಯಣಾಖ್ಯೇನ ಗುರುಪಾದಪ್ರಸಾದತಃ ।**
**ಕೃತೇಯಂ ಮಂಜರೀಮಾಲಾ ಕೃಷ್ಣಃ ಪ್ರೀಣಾತು ಮೇ ಸದಾ ॥**

**ತಾತ್ಪರ್ಯ :-** ನನ್ನ ಜನಕರೂ, ಆಧ್ಯಾತ್ಮವಿದ್ಯೋಪದೇಶಕರೂ, ಕುಲಗುರುಗಳೂ ಆದ ಶ್ರೀಮಂತ್ರಾಲಯ-ಶ್ರೀಪಾದಂಗಳವರ (ಪ್ರಸಾದದಿಂದ) ಚರಣಾನುಗ್ರಹದಿಂದ ಶ್ರೀಲಕ್ಷ್ಮೀನಾರಾಯಣಾಚಾರ್ಯರೆಂಬ ಹೆಸರುಳ್ಳ ನಮ್ಮಿಂದ ಶ್ರೀಗುರುಸಾರ್ವಭೌಮ ವಿರಚಿತ ಶ್ರೀಕೃಷ್ಣಚಾರಿತ್ರಮಂಜರೀ ಎಂಬ ಸ್ತೋತ್ರ (ಕಾವ್ಯ)ಕ್ಕೆ 'ಮಾಲಾ' ಎಂಬ ಈ ವ್ಯಾಖ್ಯಾನವು ರಚಿಸಲ್ಪಟ್ಟಿತು. ಇದರಿಂದ ಶ್ರೀಕೃಷ್ಣನು ನನಗೆ ಪ್ರೀತನಾಗಲಿ ಎಂದು ಭಾವ.

***ಇತಿ ಶ್ರೀಮತ್ಷಾಷ್ಟಿಕಕುಲಾವತಂಸ ವಿದ್ವತ್ಕುಲತಿಲಕರಾದ ಶ್ರೀಮಲ್ಲಕ್ಷ್ಮೀನಾರಾಯಣಾಚಾರ್ಯರು ಶ್ರೀಕೃಷ್ಣಚಾರಿತ್ರಮಂಜರಿಗೆ ರಚಿಸಿದ ''ಮಂಜರೀಮಾಲಾ'' ಎಂಬ ವ್ಯಾಖ್ಯಾನವು ಮುಗಿದುದು.***

ಶ್ರೀಕೃಷ್ಣಚಾರಿತ್ರಮಂಜರೀಮಾಲೆಯ ಅನುವಾದವನ್ನು ಪರಿಸಮಾಪ್ತಿಗೊಳಿಸುತ್ತಾ ಅನುವಾದಕರು ಮಂಗಳ-ಮಾಡುತ್ತಿದ್ದಾರೆ.

ನಿರವಧಿಗುಣಪೂರ್ಣಃ ನಿತ್ಯನಿರ್ಮುಕ್ತದೋಷಃ
ಜಗದುದಯಮುಖೇಶಃ ವೇದವೇದಾಂತಪೋಷಃ ।
ಗುರುಕರಕಮಲಾರ್ಚ್ಯಃ ಬ್ರಹ್ಮರುದ್ರಾದ್ಯುಪಾಸ್ಯಃ
ಸಮವತು ವನಮಾಲೀ ಮಾಂ ಸದಾ ಶ್ರೀರಮೇಶಃ ॥ 1 ॥

ಸುಯಮೀಂದ್ರಹೃದಂಭೋಜಭಾಸ್ಕರೋ ಮಂತ್ರಮಂದಿರಃ ।
ಮತ್ಸೇವಯಾನಯಾ ಪ್ರೀತೋ ದದ್ಯಾತ್ ಸದ್‌ಜ್ಞಾನಸಂತತಿಮ್ ॥ 2 ॥

ಯತ್ಸೇವಯೋಪದೇಶೇನ ಸದ್‌ಜ್ಞಾನಂ ಶುಭಮಾಪ್ತವಾನ್ ।
ತಂ ವಂದೇ ಸುಯಮೀಂದ್ರಾರ್ಯದೇಶಿಕಂ ಸರ್ವಪೋಷಕಮ್ ॥ 3 ॥

